೨೫೦ ಉಪನ್ಯಾಸ ಗ್ರಂಥಮಾಲೆ

# ಕನ್ನಡದಲ್ಲಿ ಪ್ರವಾಸ ಸಾಹಿತ್ಯ

ಶ್ರೀ ಜಿ. ಎಸ್. ವಡಗಾಂವಿ



ಕರ್ನಾಟಕ ವಿಶ್ವವಿದ್ಯಾಲಯ

ಸಪ್ಟಂಬರ, ೧೯೭೬

ರಜತ ಮಹೋತ್ಸವದ ಪ್ರಕಟನೆ

ಉಪನ್ಯಾಸ ಗ್ರಂಥಮಾಲೆ

೨೫೦

# ಕನ್ನಡದಲ್ಲಿ ಪ್ರವಾಸ ಸಾಹಿತ್ಯ

ಜಿ. ಎಸ್. ವಡಗಾಂವಿ






ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ

ಸಪ್ಟೆಂಬರ, ೧೯೭೬

ಪ್ರಕಾಶಕರು :

**ಸಿ. ಎಸ್. ಕಣವಿ**

ನಿರ್ದೇಶಕರು,
ಪ್ರಸಾರಾಂಗ ವಿಸ್ತರಣ-ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ೫೦೦೦ ಪ್ರತಿಗಳು
ಸಪ್ಟಂಬರ, ೧೯೭೬



ಬೆಲೆ : ೨೫ ಪೈಸೆ

ಮುದ್ರಕರು :
ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ,
ಧಾರವಾಡ-೫೮೦ ೦೦೩

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗವಿಸ್ತರಣ ಹಾಗೂ ಪ್ರಕಟನ ಶಾಖೆಯ ಮುಖಾಂತರ ಕೈಕೊಂಡು ನಡೆ ಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರು ವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರ ಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕ ಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧ ಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತ ವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿ ಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಾಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಮಾಲೆಗಳನ್ನು ಏರ್ಪಡಿಸಲು ವಿಶ್ವವಿದ್ಯಾಲ ಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನವಿಟ್ಟು ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೨೪೯ ಪುಸ್ತಕಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ
೧೫-೯-೭೬

ಆರ್. ಸಿ. ಹಿರೇಮಠ
ಕುಲಪತಿಗಳು

# ಅರಿಕೆ

ಪಿ.ಯು.ಸಿ. ಮತ್ತು ಬಿ.ಕಾಂ. ಪ್ರಥಮ ವರ್ಷದ ವಿದ್ಯಾರ್ಥಿಗಳಿಗೆ ಪ್ರವಾಸ ಕಥನಗಳನ್ನು ಪಾಠ ಮಾಡುವಾಗ ವಿದ್ಯಾರ್ಥಿಗಳಿಗೆ ಪ್ರವಾಸ ಸಾಹಿತ್ಯದ ಸಿಂಹಾವಲೋಕನ ಮಾಡಿಸಬೇಕೆಂಬ ಉದ್ದೇಶದಿಂದ ಅತ್ತ ಇತ್ತ ಈ ವಿಷಯಕ್ಕಾಗಿ ಹುಡುಕಾಡಿದೆ. ಒಂದು ಕಡೆ ಸರಿಯಾಗಿ ಈ ಬಗ್ಗೆ ಲೇಖನವಾಗಲೀ ಪುಸ್ತಕವಾಗಲೀ ದೊರೆಯಲಿಲ್ಲ. ನಾನೇ ಏಕೆ ಪ್ರಯತ್ನಿಸಬಾರದು ಅನಿಸಿ ಸಿದ್ಧತೆ ಮಾಡಿಕೊಂಡೆ. ಉಪನ್ಯಾಸಕ್ಕಾಗುವಷ್ಟು ಬೆಳೆದದ್ದರಿಂದ ನಿರ್ದೇಶಕರಿಗೆ ಬರೆದೆ. ಅವರಿಂದ ಆಮಂತ್ರಣವೂ ಬಂತು. ಸಜ್ಜಲಗುಡ್ಡದಲ್ಲಿ ನಾನು ಮಾಡಿದ ಉಪನ್ಯಾಸದ ಲಿಖಿತ ರೂಪವೇ ಈ ಪುಟಾಣಿ ಪುಸ್ತಕ.

ಅವಕಾಶ ಕಲ್ಪಿಸಿ ಪ್ರೋತ್ಸಾಹಿಸಿ, ಪುಟ್ಟ ಪ್ರವಾಸ ಕೈಕೊಳ್ಳಲು ಪ್ರೇರೇಪಿಸಿದ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ಮೊದಲು ನನ್ನ ಅನಂತ ಕೃತಜ್ಞತೆಗಳು. ಅನೇಕ ಪ್ರವಾಸ ಗ್ರಂಥಗಳನ್ನೊದಗಿಸಿ, ಹುರಿದುಂಬಿಸುತ್ತ ಈ ಕೃತಿ ಇಷ್ಟು ಬೇಗ ಬರುವಂತೆ ಮಾಡಿದ ನನ್ನ ಸಹೋದ್ಯೋಗಿ ಮಿತ್ರವೃಂದವನ್ನೂ ನಾನು ನೆನೆಯದಿರಲಾರೆ.

# ೧. ಪೀಠಿಕೆ

"ಕೋಶ ಓದು; ದೇಶ ನೋಡು" ಎಂಬುದು ಕನ್ನಡದ ಒಂದು ಗಾದೆ. ಇಲ್ಲಿ ಕೋಶ ಅಮರಕೋಶವನ್ನು ಪ್ರತಿನಿಧಿಸುತ್ತದೆ; ದೇಶ ಪ್ರವಾಸ ಮಾಡು ಎಂಬುದನ್ನು ಸೂಚಿಸುತ್ತದೆ. ನಮ್ಮ ಪೂರ್ವಜರು ಪ್ರವಾಸವನ್ನು ಗ್ರಂಥಾಭ್ಯಾಸದಷ್ಟೇ ಮಹತ್ವದ್ದು ಎಂಬುದನ್ನು ಹೀಗೆ ಸೂಚ್ಯವಾಗಿ ಹೇಳಿದ್ದಾರೆ. ಮಾನವನ ಜ್ಞಾನಸಂಪಾದನೆಯ ಕಾರ್ಯ ಕೇವಲ ಶಾಸ್ತ್ರಗ್ರಂಥಗಳನ್ನು ಉರುಹಾಕುವದರಿಂದ ಪೂರ್ತಿಯಾಗುವದಿಲ್ಲ; ದೇಶಪರ್ಯಟನ ಮಾಡಿದ ಮೇಲೆ ಅದಕ್ಕೊಂದು ಪೂರ್ಣಸ್ವರೂಪ ಬರುವದೆಂದು ಅವರು ನಂಬಿದ್ದರು. ಓದಿಗಿಂತಲೂ, ಅಪರೋಕ್ಷ ಜ್ಞಾನಕ್ಕಿಂತಲೂ ಪ್ರತ್ಯಕ್ಷಜ್ಞಾನ ಯಾವ ಕಾಲಕ್ಕೂ ಶ್ರೇಷ್ಠವಾದದ್ದು. ಕೋಶ ಓದುವದು ಥಿಯರಿ; ದೇಶಾಟನೆ ಪ್ರಾಕ್ಟಿಕಲ್ ಎಂದು ಹೇಳಬಹುದು.

ಗುರುಕುಲದಲ್ಲಿ ಶಿಕ್ಷಣ ಪಡೆದು ಶಾಸ್ತ್ರಗಳಲ್ಲಿ ಪ್ರವೀಣನಾದ ಮೇಲೆ ವಿದ್ಯಾರ್ಥಿಯನ್ನು 'ಕಾಶೀಯಾತ್ರೆ' ಎಂಬ ಅಭಿದಾನದಿಂದ ದೇಶಪರ್ಯಟನಕ್ಕೆ ಕಳಿಸುತ್ತಿದ್ದರಂತೆ. ಸಂನ್ಯಾಸಿಗಳಾದವರು ಸಕಲ ವಿದ್ಯಾಪಾರಂಗತರಾದ ಮೇಲೆ ಅನ್ಯಪಂಡಿತರ ಜೊತೆ ವಿಚಾರ-ವಿನಿಮಯ ಮಾಡಿಕೊಳ್ಳುವ ದೃಷ್ಟಿಯಿಂದ ನಾಡಿನ ಉದ್ದಗಲಕ್ಕೂ ಪ್ರವಾಸ ಕೈಕೊಳ್ಳುತ್ತಿದ್ದುದು ಒಂದು

ರೂಢಿಯಾಗಿತ್ತು. ವಿದ್ಯಾಭ್ಯಾಸ ಮುಗಿದ ಬಳಿಕ ಶಂಕರಾಚಾರ್ಯರು ದೇಶಾದ್ಯಂತ ಸುತ್ತಿದರು. ಭಾರತೀಯ ಧರ್ಮ, ಸಂಸ್ಕೃತಿಗಳ ವೈವಿಧ್ಯವನ್ನು ಅರಿತುಕೊಂಡರು. ಅದರಿಂದ ಅವರ ಅನುಭವ ವಿಸ್ತಾರವಾಯಿತು.

ಗುರುಕುಲದ ಒಂದು ಉಪಕ್ರಮವಾದ ದೇಶಪರ್ಯಟನ ಕಾರ್ಯವು ಗುರುಕುಲ ವ್ಯವಸ್ಥೆ ನಿಂತುಹೋಗುವದರ ಜೊತೆಗೇ ನಿಂತುಹೋಯಿತು. ವಿದ್ಯಾರ್ಥಿಗೆ ಚಾಕ್ಷುಷ ಜ್ಞಾನ ಒದಗಿಸುವುದಕ್ಕೆ ಪ್ರವಾಸಕ್ಕಿಂತ ಪರಿಣಾಮಕಾರಿಯಾದ ಮತ್ತೊಂದು ಮಾರ್ಗ ಇನ್ನಿಲ್ಲವೆಂಬುದು ನಮ್ಮ ಹಿರಿಯರ ನಂಬುಗೆಯಾಗಿತ್ತು. ದೇಶ ಸಂಚಾರದಿಂದ ವಿದ್ಯಾರ್ಥಿಯ ಲೋಕವ್ಯವಹಾರ ಜ್ಞಾನ ಬೆಳೆಯುತ್ತಿತ್ತು. ಅನುಭವದ ಕ್ಷೇತ್ರ ವಿಸ್ತಾರವಾಗುತ್ತಿತ್ತು; ಸಂಕುಚಿತ ಭಾವನೆ ದೂರವಾಗುತ್ತಿತ್ತು.

ಪ್ರವಾಸವೆಂದಾಗ ಪ್ರಯಾಸ ಇದ್ದೇ ಇರುತ್ತದೆ. ಹಳೆಯ ಕಾಲದಲ್ಲಿ ಇದ್ದಿರಬಹುದಾದ ಪ್ರಯಾಸ, ಅಡ್ಡಿ-ಆತಂಕಗಳು ಬೇರೆ. ಹೊಸ ಕಾಲದ ಅಡ್ಡಿ-ಆತಂಕಗಳು ಬೇರೆ. ಪ್ರಯಾಣದ ಕಾಲದಲ್ಲಿ ಎದುರಿಸಬೇಕಾದ ಕಷ್ಟ-ನಷ್ಟಗಳು, ಅಡ್ಡಿ-ಆತಂಕಗಳು ಪ್ರಯಾಣಿಕನಿಗೆ ತನ್ನ ಮುಂದಿನ ಜೀವನದಲ್ಲಿ ಎದುರಿಸಬೇಕಾದ ಹಲವಾರು ತೊಂದರೆಗಳಿಗೆ ಮಾರ್ಗದರ್ಶನವನ್ನು ನೀಡುತ್ತವೆಂದು ಹೇಳಬಹುದು.

ವಿದೇಶಗಳಲ್ಲಿ ಇಂಥ ಸಾಹಸದ ಹವ್ಯಾಸವಿಟ್ಟುಕೊಂಡು ಹೊಸ ಹೊಸ ಭೂಪ್ರದೇಶವನ್ನು ಶೋಧಿಸಿದ ಪ್ರವಾಸಿಗಳು

ಹಲವರಿದ್ದಾರೆ. ಮಾರ್ಕೋಪೋಲೋ, ಕೋಲಂಬಸ್, ವಾಸ್ಕೋಡಿ ಗಾಮಾ, ಫಾಹಿಯಾನ್ ಮುಂತಾದ ಯಾತ್ರಿಕರನ್ನು ಇಲ್ಲಿ ಹೆಸರಿಸಬಹುದು. ಅವರು ಮನುಕುಲಕ್ಕೆ ಅಪಾರ ಉಪಕಾರ ಮಾಡಿರುವದನ್ನು ಇಲ್ಲಿ ನೆನೆಯಬೇಕು.

ಈ ದೃಷ್ಟಿಯಿಂದ ನಮ್ಮ ಪ್ರಾಚೀನ ಇತಿಹಾಸದ ಪುಟಗಳನ್ನು ತಿರುವಿ ಹಾಕಿದಾಗ ನಮ್ಮವರೂ ನಮ್ಮ ದೇಶದ ಗಡಿಗಳನ್ನು ದಾಟಿ ಹೊರದೇಶಕ್ಕೆ ಹೋದುದು ಕಂಡುಬರುತ್ತದೆ. ಆದರೆ ಭಾರತೀಯರ ಚಟುವಟಿಕೆಗಳಿಗೆ ಧರ್ಮವೇ ಜೀವಾಳವಾಗಿರುವದರಿಂದ ಧರ್ಮಪ್ರಚಾರಕ್ಕಾಗಿ ನಮ್ಮ ಅರಸರು ಹಿಂದೂ ಮಹಾಸಾಗರದ ದ್ವೀಪಗಳತ್ತ ಪಯಣ ಕೈಕೊಂಡಿದ್ದರು. ಗಂಗ ಅರಸರ ಒಂದು ವಂಶ ಮಲಯಾ ದೇಶಕ್ಕೆ ಹೋಗಿ ರಾಜ್ಯಭಾರ ಮಾಡಿತಂತೆ. ಧರ್ಮಪ್ರಚಾರ ಇಲ್ಲವೆ ರಾಜ್ಯವಿಸ್ತಾರ ಇವುಗಳೇ ನಮ್ಮವರ ದೇಶಾಟನೆಗೆ ಮೂಲಪ್ರೇರಣೆಯಾಗಿದ್ದಂತೆ ತಿಳಿದು ಬರುತ್ತದೆ.

ನಮ್ಮ ಪೂರ್ವಜರ ಈ ಬಗೆಯ ಪ್ರವಾಸದ ರೀತಿಯು ಯಾತ್ರೆಯಂತಿತ್ತು. ಯಾಕೆಂದರೆ ಭಾರತೀಯರು ಪ್ರವಾಸದ ಮಹತ್ವವನ್ನು ಅದರ ನಿಜವಾದ ಅರ್ಥದಲ್ಲಿ ತಿಳಿದಿರಲಿಲ್ಲ. ನಮ್ಮಲ್ಲಿ ಪ್ರವಾಸ ಎಂದರೆ ತೀರ್ಥಯಾತ್ರೆಯೇ ಎನ್ನುವ ಕಾಲ ಒಂದಿತ್ತು. ಪುಣ್ಯಕ್ಷೇತ್ರಗಳ ದರ್ಶನ, ಪಾಪ ಪರಿಹಾರ, ಪುಣ್ಯ ಸಂಪಾದನೆ ಈ ಧಾರ್ಮಿಕ ದೃಷ್ಟಿಯೇ ನಮ್ಮವರಿಗೆ ಮುಖ್ಯವಾಗಿತ್ತು. ಕನ್ನಡದಲ್ಲಿ ಪ್ರಕಟವಾದ ಮೊದಲ ಘಟ್ಟದ ಪ್ರವಾ

ಪದ ಕಥಾನಕಗಳನ್ನು ನೋಡಿದಾಗ ಈ ಮಾತಿನ ಅರ್ಥ ಸಮ ಗಾಗುತ್ತದೆ. ಕನ್ನಡದ ಪ್ರಾರಂಭದ ಪ್ರವಾಸ ಗ್ರಂಥಗಳಲ್ಲಿ ಸಿಂಹಪಾಲು ಇಂಥ ಯಾತ್ರಾಕಥೆಗಳದ್ದೇ ಆಗಿದ್ದು +"ಕನ್ನಡದಲ್ಲಿ ಪ್ರಕಟವಾಗಿರುವ ಪ್ರವಾಸ ಕಥಾನಕಗಳಲ್ಲಿ ಅರ್ಧಕ್ಕಿಂತ ಹೆಚ್ಚು ಗ್ರಂಥಗಳು ಕ್ಷೇತ್ರ ಪರಿಚಯುವನ್ನು ಮಾಡಿಕೊಡುವಂಥವು" ಇಂಥ ಗ್ರಂಥಗಳಲ್ಲಿ ಸಾಹಿತ್ಯಮೌಲ್ಯ ಗೌಣ; ಕ್ಷೇತ್ರ ಪರಿಚಯುವೇ ಮುಖ್ಯ.

ಪ್ರವಾಸ ಸಾಹಿತ್ಯ ರಚಿಸಿದವರಲ್ಲಿ ಮೊದಲಿಗರು ಆಂಗ್ಲರು. ಪ್ರವಾಸ ಸಾಹಿತ್ಯವೆಂಬ ಪ್ರಕಾರ ಅಲ್ಲಿಯೂ ಬೆಳೆದದ್ದು ಈಚೆಗೆ. ಆದರೂ ಅಲ್ಲಿ ೧೭-೧೮ನೆಯ ಶತಮಾನಗಳಿಂದಲೂ ಗದ್ಯ ಸಾಹಿತ್ಯದಲ್ಲಿ ಪ್ರವಾಸಾನುಭವ ಬೆರೆತುಕೊಂಡೇ ಇದೆ. ಆಂಗ್ಲ ಸಾಹಿತಿ ರಾಬರ್ಟ್ ಸ್ಟಿವನ್‌ಸನ್ (೧೮೫೦-೯೪) "ಕತ್ತೆ ಯೊಡನೆಪ್ರವಾಸಗಳು" ಎನ್ನುವ ಪುಸ್ತಕದಲ್ಲಿ, ಫ್ರಾನ್ಸಿನಲ್ಲಿ ತಾನು ಮಾಡಿದ ಪ್ರವಾಸದ ವಿಷಯವನ್ನು ಚಿತ್ರಿಸಿದ್ದಾನೆ. ಇಂಗ್ಲೀಷಿನಲ್ಲಿ ಪ್ರವಾಸ ಸಾಹಿತ್ಯದಿಂದ ಪ್ರೇರಿತವಾದ ಕಾದಂಬರಿ ಗಳೂ ಇವೆ. "ಗಲಿವರನ ಪ್ರವಾಸಗಳು" ಇಂಥ ಒಂದು ಕೃತಿ. "ಡಾನ್‌ಕ್ವಿಕ್ಸೋಟ" ಇನ್ನೊಂದು ಗಮನಾರ್ಹ ಕೃತಿ. ಈ ಬಗೆಯ ಗ್ರಂಥಗಳು ಕನ್ನಡದಲ್ಲಿ ಇನ್ನೂ ಬರಬೇಕಾಗಿವೆ.

ಆಧುನಿಕ ಭಾರತೀಯ ಸಾಹಿತ್ಯಕ್ಕೆ ಪಾಶ್ಚಾತ್ಯ ಸಾಹಿತ್ಯವೇ ಮೂಲಪ್ರೇರಣೆಯಾಗಿದೆ. ಕನ್ನಡ ಸಾಹಿತ್ಯದ ಅನೇಕ

---

+ ವಿಶ್ವಕೋಶ-iii.

ಪ್ರಕಾರಗಳಿಗೆ ಇಂಗ್ಲೀಷ ಸಾಹಿತ್ಯದ ಪ್ರೇರಣೆ ಕಾರಣವಾದಂತೆ ಪ್ರವಾಸ ಸಾಹಿತ್ಯಕ್ಕೂ ಅದೇ ಸ್ಫೂರ್ತಿಯನ್ನು ನೀಡಿದೆ. "ಇಂಗ್ಲೀಷಿನಿಂದ ನಾವು ಪ್ರವಾಸ ಕಥನದಲ್ಲಿ ಸ್ಫೂರ್ತಿ ಪಡೆದೆವಾದರೂ ನಮ್ಮ ಪ್ರವಾಸಗಳ ರೀತಿ, ಉದ್ದೇಶಗಳು ಬೇರೆಯ ರೀತಿಯವು. ನಮ್ಮ ಕಥನಗಳು ಆರಂಭವಾದ ಬಗೆಯೂ ಪ್ರತ್ಯೇಕ ಪ್ರವಾಸ ಕಥನದ ವಿಚಾರವನ್ನಷ್ಟೇ ನಾವು ಇಂಗ್ಲೀಷಿನಿಂದ ತಿಳಿದುಕೊಂಡರೂ ಅದರ ಅನುಕರಣೆಯನ್ನು ನಾವು ಮಾಡಲಿಲ್ಲ ಎಂಬುದು ಗಮನಿಸಬೇಕಾದ ವಿಚಾರ."

ಪ್ರಾಚೀನ ಭಾರತೀಯ ಸಾಹಿತ್ಯದಲ್ಲೂ ಪ್ರವಾಸ ಸಾಹಿತ್ಯದ ಗುಂಪಿಗೆ ಸೇರಬಹುದಾದ ಕೆಲವು ಗ್ರಂಥಗಳಿವೆ. ಕಲ್ಹಣ, ರಜೋನರಾಜ, ಶ್ರೀವರ, ಪ್ರಾಜ್ಯಭಟ್ಟ, ಶುಕ, ಸೋಮೇಶ್ವರ, ಅರಿಸಿಂಹ ಮುಂತಾದವರು ಐತಿಹಾಸಿಕ, ಭೌಗೋಲಿಕ ಹಾಗೂ ಅಂದಿನ ರಾಜಕೀಯ ಸ್ಥಿತಿ-ಗತಿಗಳನ್ನು ನಿರೂಪಿಸುವ ಗ್ರಂಥಗಳನ್ನು ರಚಿಸಿದ್ದಾರೆ.

**ಪ್ರವಾಸದ ಉದ್ದೇಶ :** ಈ ಹಿಂದೆ ಹೇಳಿದಂತೆ ನಮ್ಮ ಪೂರ್ವಜರ ಪ್ರವಾಸದ ಉದ್ದೇಶ ಪುಣ್ಯಕ್ಷೇತ್ರಗಳ ದರ್ಶನವಾಗಿತ್ತು. ಕಾಲ ಬದಲಾದಂತೆ ಉದ್ದೇಶಗಳೂ ಬದಲಾಗುತ್ತವೆ. ಧರ್ಮಪ್ರಚಾರಕ್ಕಾಗಿ, ದಿಗ್ವಿಜಯಕ್ಕಾಗಿ, ಪುಣ್ಯಸಂಗ್ರಹಕ್ಕಾಗಿ ಹೀಗೆ ನಾನಾ ಉದ್ದೇಶಗಳಿಂದ ನಮ್ಮ ಜನ ದೇಶ-ಪರ್ಯಟನ ಮಾಡಿದ್ದಾರೆ.

ಇಂದು ಪ್ರವಾಸದ ಉದ್ದೇಶಗಳು ಬೇರೆಯಾಗಿವೆ. ಹಿಂದೆ ಇದ್ದ ಉದ್ದೇಶಗಳ ಜೊತೆಗೇ ಹೊಸ ಉದ್ದೇಶಗಳು ಸೇರಿ

ಕೊಂಡಿವೆ; ಉಚ್ಚ ವ್ಯಾಸಂಗ, ಕಚೇರಿಯ ಕೆಲಸ, ವ್ಯಾಪಾರ, ಸಾಹಸ ಕಾರ್ಯಸಾಧನೆ, ಸುಂದರ ಸ್ಥಳಗಳ ದರ್ಶನ ಇತ್ಯಾದಿ. ಪ್ರವಾಸಕ್ಕೆ ಒಂದು ನಿಶ್ಚಿತ ಗುರಿ ಇರಲೇಬೇಕೆ ಎಂಬ ಪ್ರಶ್ನೆಗೆ ಉತ್ತರ ಖಚಿತವಾಗಿ ಹೇಳಲಿಕ್ಕಾಗದು. ಗೊತ್ತು-ಗುರಿ ಇಲ್ಲದ ಅಲೆದಾಟ ಇರಲಾರದೆ? ಇರಬಹುದು. ಅಷ್ಟೇ ಏಕೆ ಹಾಗೆ ಗೊತ್ತು-ಗುರಿ ಇಲ್ಲದ ಅಲೆದಾಟದಲ್ಲಿ ಒಂದು ಅನಿರ್ವಚನೀಯ ಆನಂದವೂ ಇದೆ, ಎಂದು ಒಬ್ಬ ಇಂಗ್ಲೀಷ ಕವಿ (It is good to be out on the road and going one knows not where–John Masefield) ಹೇಳುತ್ತಾನೆ.

ಪ್ರವಾಸ ಕೆಲವರಿಗೆ ಒಂದು ಹವ್ಯಾಸ. ವಿಶೇಷವಾಗಿ ಅನುಕೂಲಸ್ಥರಾದ ಪಾಶ್ಚಾತ್ಯರಿಗೆ ಇದು ಮಹತ್ವದ ಹವ್ಯಾಸ. ಸುಂದರ ಸ್ಥಳಗಳನ್ನು ನೋಡಬೇಕು, ಸ್ವೇಚ್ಛೆಯಿಂದ ಹಕ್ಕಿಯಂತೆ ಹಾರಾಡಬೇಕು, ಹೊಸ-ಹೊಸದನ್ನು ಕಾಣಬೇಕು ಎಂದು ಯಾರಿಗೆ ಅನಿಸುವುದಿಲ್ಲ? ಆಶೆಯೇನೋ ಸಾಕಷ್ಟಿರುತ್ತದೆ. ಆದರೆ ಅದಕ್ಕೆ ನಮ್ಮ ಜೇಬು ಸಮ್ಮತಿಸಲಾರದು. ಗೊತ್ತು-ಗುರಿ ಯಿಲ್ಲದ ಅಲೆದಾಟ, ರಜಾದಿನಗಳನ್ನು ಮಜವಾಗಿ ಕಳೆಯುವ ಪ್ರವಾಸದ ಉದಾಹರಣೆಗಳು ಪಾಶ್ಚಾತ್ಯ ದೇಶಗಳಲ್ಲಿ ಬೇಕಾದಷ್ಟು ಸಿಗುತ್ತವೆ. ಆದರೆ ನಮ್ಮಲ್ಲಿ ಇವು ವಿರಳ.

ಪ್ರವಾಸ ಸುಖದಾಯಕವಾದ ಹೂವಿನ ಹಾಸಿಗೆಯೂ ಅಲ್ಲ; ಬರೀ ತೊಂದರೆದಾಯಕವಾದ ಮುಳ್ಳಿನ ಹಾಸಿಗೆಯೂ ಅಲ್ಲ; ಅದು ಎರಡರ ಮಿಶ್ರಣವಾಗಿರುತ್ತದೆ. ಪ್ರವಾಸ ಮಾಡಬೇಕೆ

ನ್ನುವ ಚಪಲ ಮಾನವನಲ್ಲಿರುವದು ಸಹಜ. ಹೊಸದನ್ನು ನೋಡಬೇಕೆನ್ನುವ ಗುಣವು ಮಾನವನ ಮೂಲ ಪ್ರವೃತ್ತಿಯಾಗಿದೆ. ಈ ಕುತೂಹಲ ಪ್ರವೃತ್ತಿಯೇ ಹೊಸ ಹೊಸ ಸಂಗತಿಗಳ ಶೋಧನೆಗೆ, ಅನ್ವೇಷಣೆಗೆ ಕಾರಣವಾಗಿದೆ.” ಸಾಮಾನ್ಯ ಜೀವನದ ನೀತಿ ನಿಯಮಗಳಿಂದ ಕೆಲಕಾಲವಾದರೂ ದೂರವಾಗಿದ್ದು ಸ್ವಭಾವಗತವಾದ ಸ್ವಾತಂತ್ರ್ಯಾಭಿಲಾಷೆಯನ್ನು ಪೂರೈಸಿಕೊಳ್ಳಬೇಕೆಂದೇ ಮನುಷ್ಯನಲ್ಲಿಯ ಪ್ರವಾಸದ ಚಪಲಕ್ಕೆ ಕಾರಣವಾಗಿರಬಹುದು.* ಎಂದು ಬಲ್ಲವರು ಅಭಿಪ್ರಾಯಪಡುತ್ತಾರೆ.

## ೨. ಅಂತರ್‌ರಾಷ್ಟ್ರೀಯ ಪ್ರವಾಸೋದ್ಯಮ

ಪ್ರವಾಸ ಈಗ ಕೇವಲ ಹವ್ಯಾಸವಾಗಿ ಉಳಿದಿಲ್ಲ. ಅದೊಂದು ಭಾರೀ ಉದ್ಯಮವಾಗಿ ರೂಪು ತಳೆದಿದೆ. ಪಾಶ್ಚಾತ್ಯರು ಪೂರ್ವದ ದೇಶಗಳಿಗೂ, ಪೌರ್ವಾತ್ಯರು ಪಾಶ್ಚಾತ್ಯ ರಾಷ್ಟ್ರಗಳಿಗೂ ಅನೇಕ ಉದ್ದೇಶಗಳಿಗಾಗಿ ಈಗ ಹೋಗಿ ಬರುತ್ತಿದ್ದಾರೆ. ಇದರಿಂದ “ಅಂತರ್‌ರಾಷ್ಟ್ರೀಯ ಪ್ರವಾಸೊದ್ಯಮ” ಎಂಬ ಒಂದು ನುಡಿಗಟ್ಟೇ ಸೃಷ್ಟಿಯಾಗಿದೆ.

ಪ್ರಪಂಚದ ನಾನಾ ರಾಷ್ಟ್ರಗಳು ಪ್ರವಾಸದ ಈ ಹವ್ಯಾಸವನ್ನು ಉಳಿಸಿ, ಬೆಳೆಸಿಕೊಂಡು ಬಂದಿವೆ. ಭಾರತೀಯರೂ

---

* ವಿಶ್ವಕೋಶ iii

ಈ ಕಡೆಗೆ ಗಮನಕೊಡಬೇಕಾದ ಆವಶ್ಯಕತೆ ಅಧಿಕವಾಗಿದೆ. ವಿಜ್ಞಾನವು ಪ್ರವಾಸಕ್ಕೆ ಅನೇಕ ಅನುಕೂಲಗಳನ್ನು ಕಲ್ಪಿಸಿ ಕೊಟ್ಟಿದೆ. ಹಿಂದೆ ಇಂಥ ಯಾತ್ರೆ ಅಥವಾ ಪಯಣದಲ್ಲಿರಬಹುದಾದ ಅನೇಕ ಅಡ್ಡಿ ಆತಂಕಗಳು ಇಂದು ಇಲ್ಲ. ಮೋಟಾರು, ಹಡಗು, ರೈಲು, ವಿಮಾನ ಮುಂತಾದ ಆಧುನಿಕ ವಾಹನ ಸೌಕರ್ಯಗಳು ಇಂದು ಪ್ರಯಾಣ ಕಾರ್ಯವನ್ನು ಸುಗಮಗೊಳಿಸಿವೆ. ಈ ಸೌಕರ್ಯಗಳಿಂದಲೇ ಜಗತ್ತು ಇಂದು ಕಿರಿದಾಗಿದೆ. ಹಿಂದಿನ ಯಾತ್ರೆಗಿಂತ ಇಂದಿನ ಪ್ರವಾಸ ಶೀಘ್ರ ಮತ್ತು ಸುಖಕರವಾಗಿದೆ. ಹಿಂದೆ ಕಾಶೀಯಾತ್ರೆಗೆ ಹೊರಟ ವ್ಯಕ್ತಿ ಹಿಂತಿರುಗಿ ಬರುತ್ತಾನೆಂಬ ಭರವಸೆ ಇರಲಿಲ್ಲ. ಇಂದು ಅಂಥ ಭಯಕ್ಕೆ ಕಾರಣವೇ ಇಲ್ಲ.

ಪ್ರತಿಯೊಂದು ರಾಷ್ಟ್ರವೂ ಇಂದು ಹೊರನಾಡುಗಳಿಂದ ಪ್ರವಾಸಿಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಆಕರ್ಷಿಸಿ ತಮ್ಮ ರಾಷ್ಟ್ರದ ಬೊಕ್ಕಸವನ್ನು ತುಂಬಿಕೊಳ್ಳುತ್ತಿವೆ. ನಕಾಶೆಯಲ್ಲಿ ಕೇವಲ ಚುಕ್ಕೆಗಳಂತಿರುವ ಸಿಂಗಾಪುರ, ಹಾಂಕಾಂಗ ಮುಂತಾದ ರಾಷ್ಟ್ರಗಳೂ ನಮ್ಮ ಬೃಹತ್ ಭಾರತಕ್ಕಿಂತಲೂ ಹೆಚ್ಚಿನ ವಿದೇಶಿ ವಿನಿಮಯವನ್ನು ಗಳಿಸುತ್ತಿವೆ. ಶೇಕಡಾ ಎಂಬತ್ತರಷ್ಟು ಅಂತರ್‌ರಾಷ್ಟ್ರೀಯ ಪ್ರವಾಸೋದ್ಯಮವು ಪಶ್ಚಿಮ ಯುರೋಪದ ಒಂಬತ್ತು ರಾಷ್ಟ್ರಗಳಲ್ಲಿ ಸಂಯುಕ್ತ ರಾಷ್ಟ್ರ, ಕೆನಡಾ, ಜಪಾನ ಮತ್ತು ಆಸ್ಟ್ರೇಲಿಯಾಗಳಲ್ಲಿ ಹರಿದು ಹಂಚಿ ಹೋಗಿದೆ.

ಭಾರತದ ಆರ್ಥಿಕ ಅಭಿವೃದ್ಧಿ ದೃಷ್ಟಿಯಿಂದ ಈ ಉದ್ದಿಮೆಗೆ ನಾವು ಗಮನ ಕೊಡಬೇಕಾಗಿದೆ. ೧೯೫೫ ರಿಂದ ಈಚೆಗೆ ನಾವು ಈ ಕಡೆಗೆ ಲಕ್ಷ್ಯ ಹರಿಸಿದ್ದೇವೆ. ಈಚೆಗಿನ ಅಂಕಿ-ಸಂಖ್ಯೆಗಳನ್ನು ನೋಡಿದಾಗ ನಾವು ಪ್ರಗತಿ ಸಾಧಿಸಿದ್ದು ಕಂಡುಬಂದರೂ ಅದು ಅಷ್ಟು ತೃಪ್ತಿಕರವಾಗಿಲ್ಲ. ೧೯೬೦ ರಿಂದ ೧೯೭೫ ರ ಈ ಹದಿನೈದು ವರ್ಷಗಳ ಅವಧಿಯಲ್ಲಿ ೧,೨೩,೧೦೦ ಇದ್ದ ಪ್ರವಾಸಿಗಳ ಸಂಖ್ಯೆ ೪,೨೩,೧೬೧ ಕ್ಕೆ ಏರಿದೆ. ವಿದೇಶಿ ವಿನಿಮಯದ ಆದಾಯ ೨೦.೫೬ ಕೋಟಿ ರೂಪಾಯಿ ಇದ್ದದ್ದು ೬೯.೭೫ ಕೋಟಿ ರೂಪಾಯಿಗೆ ಏರಿದೆ. ಇದು ಒಂದು ದಾಖಲೆಯಾಗಿ ತೋರಿದರೂ, ಅನ್ಯರಾಷ್ಟ್ರಗಳೊಂದಿಗೆ ಹೋಲಿಸಿ ನೋಡಿದಾಗ ಅದು ಕಡಿಮೆ ಪ್ರಮಾಣದ್ದಾಗಿ ತೋರುತ್ತದೆ. ೧೯೭೪ ರ ಜಗತ್ತಿನ ಒಟ್ಟು ಆದಾಯದಲ್ಲಿ ನಮ್ಮದು ಕೇವಲ ಶೇಕಡಾ ೦.೩ ರಷ್ಟು ಇದೆ.

ಕೆಳಗೆ ಕೊಟ್ಟಿರುವ ಪಟ್ಟಿಯಿಂದ ೧೯೬೭ ರಿಂದ ೧೯೭೪ರ ವರೆಗಿನ ಪ್ರವಾಸೋದ್ಯಮದ ಪ್ರಗತಿಯನ್ನು ತಿಳಿದುಕೊಳ್ಳಬಹುದು.

| ಇಸ್ವಿ | ಬಂದ ಪ್ರವಾಸಿಗಳು | ಪ್ರತಿಶತ ಹೆಚ್ಚಳ | ವಿದೇಶಿ ವಿನಿಮಯ ರೂ. (ಕೋಟಿ) | ಪ್ರತಿಶತ ಹೆಚ್ಚಳ |
|---|---|---|---|---|
| ೧೯೬೭ | ೧,೭೯,೫೬೫ | ೧೨.೫ | ೨೫.೨ | ೧೧.೫ |
| ೧೯೬೮ | ೧,೮೮,೮೨೦ | ೫.೨ | ೨೬.೪ | ೪.೯ |
| ೧೯೬೯ | ೨,೪೪,೭೨೪ | ೨೯.೬ | ೩೩.೧ | ೨೫.೩ |
| ೧೯೭೦ | ೨,೮೦,೮೨೧ | ೧೪.೮ | ೩೮.೦ | ೧೪.೮ |
| ೧೯೭೧ | ೩,೦೦,೯೯೫ | ೭.೨ | ೪೦.೪ | ೬.೨ |
| ೧೯೭೨ | ೩,೪೨,೯೫೦ | ೧೩.೯ | ೪೮.೩ | ೧೯.೬ |
| ೧೯೭೩ | ೪,೦೯,೬೯೫ | ೧೯.೫ | ೬೭.೫ | ೩೯.೮ |
| ೧೯೭೪ | ೪,೨೩,೧೬೧ | ೩.೨ | ೬೯.೭ | ೩.೨ |

ನಮ್ಮ ದೇಶದಲ್ಲಿ ಪ್ರೇಕ್ಷಣೀಯ ಸ್ಥಳಗಳ ಕೊರತೆಯೇನೂ ಇಲ್ಲ. ಹಲವಾರು ಆಶ್ಚರ್ಯಕರವಾದ ಸಂಗತಿಗಳು

ಇಲ್ಲಿವೆ. ಇಲ್ಲಿನ ರುದ್ರರಮಣೀಯ ನಿಸರ್ಗ ಸೌಂದರ್ಯ, ವಾಸ್ತುಶಿಲ್ಪ, ಮೃಗಪಕ್ಷಿಗಳು ಜಾನಾಂಗಿಕ ವೈಶಿಷ್ಟ್ಯಗಳು, ವೇಷ-ಭೂಷಣಗಳು ಇತ್ಯಾದಿ. ನಮ್ಮಲ್ಲಿರುವಷ್ಟು ವೈವಿಧ್ಯ ಬೇರೆಡೆಗಳಲ್ಲಿ ಸಿಗುವದು ವಿರಳ. ಹಿಮಾಲಯವೊಂದೇ ಸಹ-ಸ್ರಾರು ವಿದೇಶಿ ಪ್ರವಾಸಿಗರನ್ನು ಆಕರ್ಷಿಸಬಲ್ಲುದು. ಹಾಗಿದ್ದರೂ ಪರದೇಶದ ಪ್ರವಾಸಿಗಳನ್ನು ನಾವು ವಿಶೇಷವಾಗಿ ಆಕರ್ಷಿಸುವಂತಾಗಿಲ್ಲವೇಕೆ ? ಈ ವಿಷಯವಾಗಿ ನಮ್ಮ ದೇಶದ ಬುದ್ಧಿಜೀವಿಗಳು, ಸರಕಾರದವರು ಇಂದು ಗಂಭೀರವಾಗಿ ಆಲೋಚಿಸಬೇಕಾಗಿದೆ. ಹಾಗೂ ಸೂಕ್ತ ಕ್ರಮಗಳನ್ನು ಕಂಡು ಹಿಡಿಯಬೇಕಾಗಿದೆ.

ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಪ್ರವಾಸೋದ್ದಿಮೆಗೆ ಕೇಂದ್ರ ಮತ್ತು ರಾಜ್ಯ ಸರಕಾರಗಳಿಂದ ೩೩ ಕೋಟಿ ರೂಪಾಯಿಗಳಷ್ಟು ಖರ್ಚಾಗಿದೆ. ಪ್ರವಾಸಿ ಮಂದಿರಗಳನ್ನು, ಕೆಫೆ, ರೆಸ್ಟುರಾಂಟಗಳನ್ನು ಕಟ್ಟಲಾಗಿದೆ. ಕೇವಲ ಹಣ ಖರ್ಚು ಮಾಡುವದರಿಂದ ಪರಿಸ್ಥಿತಿ ಸುಧಾರಿಸಲಾರದು. ದಕ್ಷ ಆಡಳಿತ ಸರಿಯಾದ ವ್ಯವಸ್ಥೆ ಬೇಕು.

ನಮ್ಮ ಪ್ರವಾಸಿ ಮಂದಿರಗಳ ಪರಿಸ್ಥಿತಿ ಸುಧಾರಿಸಬೇಕು. ವಿದೇಶಿಯರಿಗೆ ಒಗ್ಗುವಂತೆ ಊಟ, ವಸತಿ ಮತ್ತು ವಾಹನ ಸೌಕರ್ಯಗಳು ಹೆಚ್ಚಬೇಕು.

ಈಗ ಪ್ರವಾಸದ ನಿಯಮಾವಳಿಗಳಲ್ಲಿ ಎಷ್ಟೋ ಸುಧಾರಣೆಯಾಗಿದೆ. ೨೮ ದಿನಗಳ ವರೆಗಿನ ಪ್ರವಾಸಕ್ಕೆ ವೀಸಾದ ಆವಶ್ಯ

ಕತೆ ಇಲ್ಲ. ಕಸ್ಟಮ್ ಅಧಿಕಾರಿಗಳು ವಿನಮ್ರರೂ ಸ್ನೇಹ
ಪರರೂ ಆಗಿದ್ದಾರೆ. ಕೊವಲಮ್ ಬೀಚ ಮತ್ತು ಕಾಶ್ಮೀರದ
ಗುಲ್‌ಮಾರ್ಗಗಳಲ್ಲಿ ಸುಧಾರಣೆಗಳಾಗಿವೆ. ೧೯೭೮ರ ಸುಮಾರಿಗೆ
ಅಂದಾಜು ಎಂಟು ಲಕ್ಷ ವಿದೇಶಿ ಪ್ರವಾಸಿಗರು ಬರುವ ಗುರಿ
ಯನ್ನು ಪ್ರವಾಸೋದ್ಯಮ ಶಾಖೆ ಇಟ್ಟುಕೊಂಡಿದೆ.

ದೇಶದೊಳಗಿನ ಪ್ರವಾಸವನ್ನು ನಾವು ಕಡೆಗಣಿಸುವಂತಿಲ್ಲ.
ಪ್ರವಾಸ ಶಿಕ್ಷಣದ ಒಂದು ಅವಿಭಾಜ್ಯ ಅಂಗವಾಗಿರುವದರಿಂದ
ಯುವಜನಾಂಗ ಹೆಚ್ಚು ಹೆಚ್ಚು ಪ್ರವಾಸಾನುಭವ ಪಡೆಯು
ವಂತೆ ಪ್ರೋತ್ಸಾಹಿಸಬೇಕಾಗಿದೆ.

ಪ್ರವಾಸೋದ್ದಿಮೆ ಉಳಿದ ಉದ್ದಿಮೆಗಳಿಗಿಂತ ಭಿನ್ನ
ವಾದುದು. ಇಲ್ಲಿ ನಾವು ಕೊಡುವುದಕ್ಕಿಂತ ಹೆಚ್ಚಿಗೆ ಪಡೆದು
ಕೊಳ್ಳುತ್ತೇವೆ. ಸಹಕಾರ, ಪರಸ್ಪರ ತಿಳುವಳಿಕೆ, ಹೊಂದಾಣಿಕೆ
ಮೊದಲಾದ ಮಾನವೀಯ ಮೌಲ್ಯಗಳನ್ನು ಪ್ರವಾಸವು
ಸಂವರ್ಧಿಸುತ್ತದೆ.

ರಶಿಯ, ಅಮೇರಿಕ ರಾಷ್ಟ್ರಗಳಂತೆ ನಾವೂ ಐತಿಹಾಸಿಕ
ಪ್ರಜ್ಞೆಯನ್ನು ಬೆಳೆಸಿಕೊಳ್ಳಬೇಕಾಗಿದೆ. ನಮ್ಮ ಗತವೈಭವದ
ಭಗ್ನಾವಶೇಷಗಳನ್ನು ಸದ್ಯ ಇರುವಷ್ಟುಗಳನ್ನಾದರೂ ಕಾಯ್ದು
ಕೊಳ್ಳಬೇಕಾಗಿದೆ. ವೀರಗಲ್ಲು, ಮಹಾಸತಿಕಲ್ಲು, ಶಿಲಾಶಾಸನ
ಗಳನ್ನು ಹಾಳಾಗದಂತೆ ರಕ್ಷಿಸಬೇಕಾಗಿದೆ. ಎಷ್ಟೋ ಸುಂದರ
ವಿಗ್ರಹಗಳು ಕೆಲವು ವ್ಯಕ್ತಿಗಳ ದೌರ್ಜನ್ಯದಿಂದ ಭಗ್ನವಾಗಿವೆ.
ಮೂರ್ತಿಗಳ್ಳರು ನಮ್ಮ ದೇವತಾ ವಿಗ್ರಹಗಳನ್ನು ಕೋಟಿ

ಕೋಟಿ ರೂಪಾಯಿಗಳಿಗೆ ವಿದೇಶಿಯರಿಗೆ ಮಾರಿದ್ದೂ ಉಂಟು. ಲೋಹದ, ಕಲ್ಲಿನ ವಿಗ್ರಹಗಳ ಕಳ್ಳಸಾಗಾಣಿಕೆಯನ್ನು ಇನ್ನೂ ತಡೆಗಟ್ಟಬೇಕಾಗಿದೆ. ಇಡೀ ರಾಷ್ಟ್ರದ ಸೊತ್ತಾದ ನಮ್ಮ ಸಂಸ್ಕೃತಿಯ ಪ್ರತೀಕಗಳಾದ ಐತಿಹಾಸಿಕ ಅವಶೇಷಗಳು ನಮಗೆ ಗೊತ್ತಿಲ್ಲದಂತೆ ಕಣ್ಮರೆಯಾಗುತ್ತಿರುವುದು ಸರಿಯಲ್ಲ. ಈ ಬಗ್ಗೆ ವಿಶೇಷ ಕಾಳಜಿವಹಿಸುವುದು ಅಗತ್ಯವೆಂದು ಬೇರೆ ಹೇಳಬೇಕಾಗಿಲ್ಲ.

ದೊಡ್ಡ ದೊಡ್ಡ ತೀರ್ಥಕ್ಷೇತ್ರಗಳು ಇಂದು ಕಳ್ಳ ಕದೀಮರಿಂದ ತುಂಬಿದ್ದು ಕಂಡುಬರುತ್ತದೆ. ಪವಿತ್ರ ಕ್ಷೇತ್ರದ ತುಂಬ ಹೆಜ್ಜೆ ಹೆಜ್ಜೆಗೆ ವಂಚನೆ, ಮೋಸ ನಡೆಯುತ್ತಿರುವುದು ಶೋಚನೀಯ. ಇಂಥ ಪವಿತ್ರ ಕ್ಷೇತ್ರಗಳಲ್ಲಿರಬೇಕಾದ ನೀರವತೆ, ಶುಚಿ ಇಂದು ಇಲ್ಲವಾಗಿದೆ. ನಗರ ಜೀವನದ ಯಾಂತ್ರಿಕತೆ, ಗಡಿಬಿಡಿ ದಿನಚರಿಯ ಏಕತಾನತೆಯನ್ನು ಮರೆಯಬೇಕೆಂದು ಬಂದವರಿಗೆ ಇಂಥಲ್ಲಿಯೂ ನಿರಾಶೆಯೇ ಕಾದಿರುತ್ತದೆ.

ನಾಗರಿಕತೆಯ ಬೆಳವಣಿಗೆಗಿಂತ ಪೂರ್ವದಲ್ಲಿರಬಹುದಾದ ಇಂಥ ಪ್ರೇಕ್ಷಣೀಯ ಸ್ಥಳಗಳ ಸಹಜ ಸೌಂದರ್ಯ, ಅದರ ನೈಜ ಸ್ವರೂಪ ಕಾಯ್ದುಕೊಂಡು ಹೋಗುವಲ್ಲಿನ ಅನಾಸಕ್ತಿಯಿಂದಾಗಿ ಅವು ನಮ್ಮ ಮನಸ್ಸನ್ನು ಸೂರೆಗೊಳ್ಳದೇ ಹೋಗುವದೂ ಉಂಟು.

ನಮ್ಮಲ್ಲಿನ ಅನೇಕ ವಿಗ್ರಹಗಳು ನಮ್ಮ ಅಂಧಶ್ರದ್ಧೆಯಿಂದ ತಮ್ಮ ಸಹಜ ಸೌಂದರ್ಯವನ್ನು ಕಳೆದುಕೊಂಡಿವೆ.

ಕೆಲವು ವಿಗ್ರಹಗಳು ಅಲಂಕಾರಗಳಿಂದ ಮುಚ್ಚಿಹೋಗಿವೆ. ಇನ್ನು ಕೆಲವು ವಿಗ್ರಹಗಳು ಎಣ್ಣೆ ಮಜ್ಜನದಿಂದ ತಮ್ಮ ರೂಪವನ್ನು ವಿಕೃತಗೊಳಿಸಿಕೊಂಡಿವೆ. ಈ ಬಗ್ಗೆಯೂ ನಾವಿಂದು ಲಕ್ಷ್ಯವಹಿಸಬೇಕಾಗಿದೆ.

ಅಂತೂ ಪ್ರವಾಸೋದ್ದಿಮೆ ಇನ್ನೂ ನಮ್ಮಲ್ಲಿ ಪ್ರಾರಂಭದ ಹಂತದಲ್ಲಿಯೇ ಇದೆ ಈ ದಿಶೆಯಲ್ಲಿ ನಾವು ಮಾಡಿದ್ದು ಅತ್ಯಲ್ಪ; ಮಾಡಬೇಕಾದದ್ದು ಬೆಟ್ಟದಷ್ಟು.

## ೩. ಪ್ರವಾಸ ಸಾಹಿತ್ಯದ ರೂಪ ಮತ್ತು ಲಕ್ಷಣ

ಮಾನವನ ಕುತೂಹಲ ಪ್ರವೃತ್ತಿಯೇ ಪ್ರವಾಸಕ್ಕೆ ಮೂಲ ಪ್ರೇರಣೆ. ಮನುಷ್ಯನು ತಾನು ನೋಡಿದ, ತಿಳಿದುಕೊಂಡ ವಿಷಯಗಳನ್ನು ಕುರಿತು ಇನ್ನೊಬ್ಬರಿಗೆ ಹೇಳುವದರಲ್ಲಿ ಹೆಚ್ಚಿನ ಆಸಕ್ತಿಯುಳ್ಳವನಾಗಿರುತ್ತಾನೆ. ಈ ಬಗೆಯು ಆಸಕ್ತಿಯು ಸಾಹಿತ್ಯ ನಿರ್ಮಿತಿಗೂ ಕಾರಣವಾಗಿದೆ. ಲೇಖಕರು ತಮ್ಮ ಪ್ರವಾಸಾನುಭವವನ್ನು ಸುವ್ಯವಸ್ಥಿತವಾಗಿ ಬರೆವಣಿಗೆಯಲ್ಲಿ ಅಭಿವ್ಯಕ್ತಗೊಳಿಸುವದಕ್ಕೂ ಈ ಆಸಕ್ತಿಯೇ ಕಾರಣವೆಂದು ಬೇರೆ ಹೇಳಬೇಕಾಗಿಲ್ಲ. ಹಾಗೆ ಬರೆವಣಿಗೆಯು ರೂಪದಲ್ಲಿ ಬಂದ ಪ್ರವಾಸಾನುಭವವೇ ಪ್ರವಾಸ ಸಾಹಿತ್ಯ.

ಪ್ರವಾಸ ಸಾಹಿತ್ಯ ಇಂಥ ರೂಪದಲ್ಲಿಯೇ ಇರಬೇಕೆಂಬ ಕಟ್ಟುನಿಟ್ಟಾದ ನಿಯಮವೇನೂ ಇಲ್ಲ. ಅದು ಗದ್ಯದಲ್ಲಿರ ಬಹುದು, ಪದ್ಯದಲ್ಲಿರಬಹುದು. ಇಲ್ಲವೆ ವಿ. ಕೃ. ಗೋಕಾಕರ "ಇಂದಿಲ್ಲ ನಾಳೆ"ಯಂತೆ ಆಧುನಿಕ ಚಂಪುವಿನಲ್ಲೂ ಇರ ಬಹುದು. ಕಥಾನಕ, ಪ್ರಬಂಧ, ದಿನಚರಿ, ಪತ್ರಲೇಖನ, ವಿಡಂಬನ, ಹಾಸ್ಯ, ಅಣಕ, ಕವನ ಇತ್ಯಾದಿ ರೂಪಗಳಲ್ಲಿಯೂ ಅದು ಕಾಣಿಸಿಕೊಳ್ಳಬಹುದು. ಇವುಗಳಲ್ಲಿ ಯಾವುದೂ ಈ ಸಾಹಿತ್ಯ ಪ್ರಕಾಶಕ್ಕೆ ಒಗ್ಗುವಂತಹದು. ಇವುಗಳಲ್ಲಿ ಯಾವುದು ಹೆಚ್ಚು ಪರಿಣಾಮಕಾರಿ ಎಂಬುದನ್ನು ಖಚಿತವಾಗಿ ಹೇಳಲಿಕ್ಕಾ ಗದು. ಬಹುಶಃ ದಿನಚರಿ ರೂಪದ ಬರೆವಣಿಗೆ ಹೆಚ್ಚು ಉಪ ಯುಕ್ತವಾಗಬಹುದು. ಯಾಕೆಂದರೆ ಅನುಭವಕ್ಕೆ ಬಂದ ಸಂಗತಿ ಗಳು, ಘಟನೆಗಳು ಇನ್ನೂ ಮಸುಕಾಗದ ಮುನ್ನ ಅಂದಂದಿನ ಅನಿಸಿಕೆ, ಅನುಭವಗಳನ್ನು ಅಲ್ಲಿ ಬರೆದಿಡಬೇಕಾಗುತ್ತದೆ. ಅದೇನೇ ಇದ್ದರೂ ಲೇಖಕರ ಬರೆವಣಿಗೆಯ ರೀತಿಯ ಮೇಲೆ ಪ್ರವಾಸ ಸಾಹಿತ್ಯದ ಪ್ರಭಾವ ಅವಲಂಬಿಸಿದೆ.

ಕನ್ನಡದಲ್ಲಿ ಪ್ರವಾಸ ಗ್ರಂಥಗಳ ಸಂಖ್ಯೆ ಕಡಿಮೆ ಯಾದರೂ ಅವು ವೈವಿಧ್ಯಮಯವಾಗಿ ಬಂದಿವೆ ಎನ್ನುವುದು ಸಮಾಧಾನದ ಸಂಗತಿ.

**ಪ್ರವಾಸ ಸಾಹಿತ್ಯದ ಲಕ್ಷಣ :** ಇತರ ಸಾಹಿತ್ಯ ಪ್ರಕಾರಗಳಿಗಿರುವಂತೆ ಇದಕ್ಕೆ ನಿರ್ದಿಷ್ಟವಾದ ಲಕ್ಷಣಗಳಿಲ್ಲ. ಇದನ್ನು ಪ್ರಬಂಧದ ಒಂದು ಪ್ರಭೇದವಾಗಿ ಇಟ್ಟುಕೊಳ್ಳ

ಬಹುದು. ಇದು ಹೆಚ್ಚಾಗಿ ವರ್ಣನಾತ್ಮಕ ಇಲ್ಲವೆ ಪರಿಚಯಾತ್ಮಕ ಪ್ರಬಂಧದಂತಿರುತ್ತದೆ.

ಪ್ರವಾಸ ಪ್ರಬಂಧಗಳು ಸಾಹಿತಿಗಳ ಸೃಷ್ಟಿಯೇ ಆಗಿರಬೇಕಾದ ಆವಶ್ಯಕತೆಯಿಲ್ಲ. ಅಂಥ ಪ್ರಬಂಧಗಳನ್ನು ಬರೆಯುವವನು ನುರಿತ ಲೇಖಕನಾಗಿರಬೇಕಾದ ಅಗತ್ಯವೂ ಇಲ್ಲ. ಆದರೆ ಅವನು ಭಾಷೆಯ ಹದ ತಿಳಿದವನಾಗಿರಬೇಕು. ರಸಿಕನೂ ಆಗಿರಬೇಕು. ಓದುಗರ ಆಸಕ್ತಿ ಹಾಳಾಗದಂತೆ ಎಷ್ಟನ್ನು ಹೇಗೆ ಹೇಳಬೇಕು ಎಂಬುದರ ಪರಿಜ್ಞಾನವೂ ಅವನಿಗಿರಬೇಕು. ಸಾಹಿತ್ಯಾಂಶಕ್ಕಿಂತ ಅಲ್ಲಿ ವಿಷಯ ನಿವೇದನೆಗೆ, ಅನುಭವದ ಸರಳ ನಿರೂಪಣೆಗೆ ಮಹತ್ವ ಹೆಚ್ಚು. ಹಾಗಿದ್ದರೂ ಪ್ರವಾಸ ಕಥನವು ಒಂದು ಸಾಹಿತ್ಯರೂಪವೆಂಬುದರಲ್ಲಿ ಸಂದೇಹವಿಲ್ಲ.

"ಯಾವ ಅನುಭವ ತನ್ನದಾಗಿ ಇನ್ನೂ ಹತ್ತು ಜನರದೂ ಆಗಿರಬಹುದೋ, ಆಗಬಹುದೋ, ಯಾವ ಅನುಭವದಲ್ಲಿ ಬಾಳಿನ ಒಂದು ಮೈಯನ್ನು ತಾನು ಕಂಡು ಎರಡನೆಯವರೂ ಕಾಣುವಂತೆ ಮಾಡಬಹುದೋ ಅಂಥ ಅನುಭವ ಸಾಹಿತ್ಯದ ಯಾವ ಬಗೆಗೂ ಆಧಾರವಾಗುವಂತೆ ಪ್ರವಾಸ ಸಾಹಿತ್ಯಕ್ಕೂ ಆಗಬಹುದು"[೧]. "ತಮ್ಮ ತಮ್ಮ ಅನುಭವಗಳನ್ನು ಅದೇ ವೈಶಿಷ್ಟ್ಯ ಎದ್ದು ಕಾಣುವಂತೆ ಬರೆಹಕ್ಕಿಳಿಸಿ ಹೇಳಿದಾಗ ಅಲ್ಲಿ ಸಾಹಿತ್ಯ ಸಾಕಾರವಾಗುತ್ತದೆ. ಲೇಖಕನ ಚಿಕಿತ್ಸಕ ದೃಷ್ಟಿ, ಸ್ವಂತಸೃಷ್ಟಿ ಶಬ್ದ ಚಿತ್ರಗಳಲ್ಲಿ ಮೂಡಿದಾಗ ವಾಸ್ತವಿಕತೆಗೆ ಶೃಂಗಾರ ಮೂಡಿ ಕೃತಿರಸಾನುಭವಕ್ಕೆ ಯೋಗ್ಯವಾಗುತ್ತದೆ"[೨].

೧ ವಿಶ್ವಕೋಶ-iii. ೨ ಅದೇ.

ಪ್ರವಾಸ ಸಾಹಿತಿಗೆ ಅನುಭವಿಸುವ ಹೃದಯ, ನೋಡುವ ಕಣ್ಣು ಎರಡೂ ಮುಖ್ಯ. ಆತ ಸಾಹಸಿಯಾಗಿರಬೇಕಾಗುತ್ತದೆ. ಅವನಿಗೆ ಜೀವನದಲ್ಲಿ ಸಂತೋಷ ಪಡೆಯುವ ಧೋರಣೆ ಇರಬೇಕು. ಈ ಸಂತೋಷ ಪಡೆಯುವ ಧೋರಣೆಯು ಅವನಿಗೆ ತತ್ಕಾಲ ಉಂಟಾಗುವ ಪ್ರಚೋದನೆಯಾಗಿರದೆ ಅವನ ಕೃತಿಗಳಲ್ಲಿ ನಿಶ್ಚಿತವಾಗಿ ಕಂಡುಬರುವ ನಂಬುಗೆಯಾಗಿರಬೇಕು. (Delight in life was not an occasional impulse but a concition declared in his works from first to last).

ಪ್ರವಾಸ ಸಾಹಿತಿಯಲ್ಲಿ ಉತ್ಸುಕತೆ, ಜಿಜ್ಞಾಸೆ, ಕಷ್ಟ ಸಹಿಷ್ಣುತೆ, ಮೊದಲಾದ ಗುಣಗಳಿರಬೇಕು. ಇವೆಲ್ಲಕ್ಕಿಂತ ಮಿಗಿಲಾಗಿ ಅಸಾಧಾರಣವಾದ ನಿರಂತರಾನ್ವೇಷಕ ದೃಷ್ಟಿ ಅವನಲ್ಲಿರಬೇಕು. (He must possess an extraordinary acute faculty of observation).

ಪ್ರವಾಸ ಸಾಹಿತ್ಯ ಉಳಿದ ಸಾಹಿತ್ಯ ಪ್ರಕಾರಗಳಿಗಿಂತ ವಿಶಿಷ್ಟವಾದದ್ದು; ಬೇರೆಯೇ ನಿಲ್ಲುವಂತಹದು. ಈ ಸಾಹಿತ್ಯದ ಅಳತೆಗೋಲು ಬೇರೆ. "ಶ್ರೀ ರಾಮಾಯಣ ದರ್ಶನಂ"ವನ್ನು ಅಳೆಯುವ ಮಾನದಂಡದಿಂದ ಪ್ರವಾಸ ಗ್ರಂಥವನ್ನು ಅಳೆಯಲಾಗದು. ಪ್ರವಾಸ ಸಾಹಿತ್ಯ ವರ್ಣನಾತ್ಮಕವಾದ ಬರೆವಣಿಗೆ. ಇಲ್ಲಿ ವಿಷಯ ಮತ್ತು ಅದರ ನಿರೂಪಣೆ ಮುಖ್ಯ. ಈ ಸಾಹಿತ್ಯವು ಒಂದು ದೃಷ್ಟಿಯಿಂದ ವಿಜ್ಞಾನದ ಕಡೆ ಒಲೆಯುವ ವಿಶಿಷ್ಟ ಪ್ರಕಾರವಾಗಿದೆ.

ಪ್ರವಾಸ ಕಥನವು ಸಾಹಿತ್ಯ ಮತ್ತು ವಿಜ್ಞಾನಗಳ ನಡುವೆ ಹರಿಯುವ ನೀರು ಭೂಗೋಲ, ಇತಿಹಾಸ, ಶಿಲ್ಪ, ಚಿತ್ರಕಲೆ, ಭೂಗರ್ಭಶಾಸ್ತ್ರ, ಪುರಾಣ ಮೊದಲಾದ ವಿಷಯಗಳೆಲ್ಲ ಇಲ್ಲಿ ಸಮಾವೇಶವಾಗುತ್ತವೆ. ಜನತೆಯ ನಡಾವಳಿ, ಸಂಸ್ಕೃತಿ, ಪ್ರಕೃತಿಯ ಪರಿಸರ ಎಲ್ಲವೂ ಇದರಲ್ಲಿ ಸೇರ್ಪಡೆಯಾಗಬೇಕಾಗುತ್ತವೆ.

ಭಾವಾವೇಶಕ್ಕೆ ಇಲ್ಲಿ ಅವಕಾಶವಿಲ್ಲ. ಭಾವುಕನಾಗಿ ತಾನು ಕಂಡ ಸ್ಥಳ, ಜನಾಂಗದ ಬಗ್ಗೆ ಬರೆಯುವ ಲೇಖಕನು ವೈಚಾರಿಕ ಹಾಗೂ ವೈಜ್ಞಾನಿಕ ದೃಷ್ಟಿಗೆ ಎರವಾಗುವ ಸಂಭವವುಂಟು. ಇಂಥ ಲೇಖಕರು ಬರೆದ ಕೃತಿಗಳು ಉನ್ನತಮಟ್ಟದ ಸಾಹಿತ್ಯಕೃತಿಗಳಾಗುವ ಸಾಧ್ಯತೆ ಕಡಿಮೆಯಿರುತ್ತದೆ.

ಕೆಲವು ಪ್ರವಾಸಿಗಳು ಭಾವಾವೇಶರಹಿತರೂ, ಕೇವಲ ವಿಚಾರಪರರೂ ಆಗಿರುವದುಂಟು. ಇಂಥವರ ಬರೆವಣಿಗೆ ವರದಿರೂಪ ತಾಳುವ ಅಪಾಯವಿಲ್ಲದಿಲ್ಲ. ಅವರ ಕೃತಿಗಳು ಗೈಡ್ ಮಾದರಿಯವಾಗುವ ಸಂಭವವಿದೆ. ಪಕ್ಷಪಾತತನದಿಂದ ಇಲ್ಲವೆ ಪೂರ್ವಗ್ರಹಪೀಡಿತರಾಗಿ ಬರೆಯುವ ಕೆಲವರ ಕೃತಿಗಳು ಸರಿಯಾದ ಜ್ಞಾನವನ್ನು ಕೊಡದೇ ಹೋಗುತ್ತವೆ.

ಪ್ರವಾಸ ಸಾಹಿತ್ಯ ಕೇವಲ ಸಾಹಿತ್ಯವಷ್ಟಾದರೆ ಸಾಲದು, ಅದು ಸಾಹಿತ್ಯಕ್ಕೆ ಸಾಮಗ್ರಿಯೂ ಆಗಬೇಕು. ಆಂಗ್ಲ ಸಾಹಿತ್ಯದಲ್ಲಿ ಪ್ರವಾಸ ಕಥನವುಳ್ಳ ಕಾದಂಬರಿಗಳೂ ದೊರೆಯುತ್ತವೆ. ಇಂಥ ಕೃತಿಗಳು ಕನ್ನಡದಲ್ಲಿ ಇನ್ನೂ ಬರಬೇಕಾಗಿವೆ.

"ಪ್ರವಾಸ ಸಾಹಿತ್ಯ ತೀರಾ ವ್ಯಕ್ತಿಗತವಾಗಿರಬಾರದು ಅಥವಾ ಸ್ಥಳೀಯ ಮಾಹಿತಿಗಳಿಂದಲೇ ತುಂಬಿರಬಾರದು ಓದಿದಾಗ ಲೇಖಕರೊಡನೆ ತಾನೂ ಪ್ರವಾಸ ನಡೆಸಿದ ಭಾವನೆ ವಾಚಕನಿಗೆ ಉಂಟಾಗಬೇಕು. ಅದು ಶ್ರೇಷ್ಠ ಪ್ರವಾಸ ಸಾಹಿತ್ಯದ ಲಕ್ಷಣ".*

## ೪. ಕನ್ನಡದಲ್ಲಿ ಪ್ರವಾಸ ಸಾಹಿತ್ಯ ಸಾಕಷ್ಟಿದೆಯೇ ?

ಇಂಗ್ಲೀಷ, ಜರ್ಮನ್, ರಶಿಯನ್ ಭಾಷೆಗಳಲ್ಲಿರುವಂತೆ ಪ್ರವಾಸ ಸಾಹಿತ್ಯದ ಬೆಳೆ ಕನ್ನಡದಲ್ಲಿ ಹುಲುಸಾಗಿಲ್ಲ. ಕನ್ನಡದ ಇತರ ಸಾಹಿತ್ಯ ಪ್ರಕಾರಗಳು ವೈವಿಧ್ಯಪೂರ್ಣವಾಗಿ ಬೆಳೆದು ನಿಂತಂತೆ ಈ ಸಾಹಿತ್ಯ ಪ್ರಕಾರ ಬೆಳೆದಿಲ್ಲ. ಇದಕ್ಕೆ ಅನೇಕ ಕಾರಣಗಳಿವೆ.

ಕನ್ನಡಿಗರು ಹೊರನಾಡಿಗೆ ಹೋಗುವದು ಕಡಿಮೆ; ಬರೆಯುವವರು ಇನ್ನೂ ಕಡಿಮೆ. ಕರ್ನಾಟಕದ ಜನ ತಮ್ಮ ಜಿಲ್ಲೆ, ರಾಜ್ಯ ರಾಜಧಾನಿ ಬಿಟ್ಟು ಹೊರಗೆ ಹೋಗುವ ಅವಕಾಶ ಸಿಕ್ಕರೂ ಹಿಂದೇಟು ಹಾಕುತ್ತಾರೆ. ನೆರೆಯ ರಾಜ್ಯಗಳ ಜನ ರೊಂದಿಗೆ ಹೋಲಿಸಿ ನೋಡಿದಾಗ ನಮ್ಮವರು ಗೃಹಜಾಡ್ಯ

---

* ವಿಶ್ವಕೋಶ-iii

(Home-sickness) ದಿಂದ ಬಳಲುತ್ತಾರೇನೋ ಅನಿಸುತ್ತದೆ. ಇದಕ್ಕೆ ಹಿರಿಯರೂ ಕಾರಣರಾಗಿದ್ದಾರೆ. ತಮ್ಮ ಮಕ್ಕಳನ್ನು ರಾಜ್ಯದಿಂದ ಹೊರಕ್ಕೆ ನೌಕರಿ ಮಾಡಲು ಕಳಿಸುವಾಗ ಅವರು ಸುಲಭವಾಗಿ ಒಪ್ಪುವದಿಲ್ಲ. ನಮ್ಮ ಮಗ ನಮ್ಮ ಕಣ್ಮುಂದೆ ಇರಬೇಕು. ಸಾಧ್ಯವಾದರೆ ಇದ್ದೂರಿನಲ್ಲೇ ನೌಕರಿ ಮಾಡ ಬೇಕು. ಇನ್ನು ವಿದೇಶಗಳಿಗೆ ಕಳಿಸಿಕೊಡುವ ಮಾತಂತೂ ದೂರವೇ ಉಳಿಯಿತು. ಹುಡುಗನಿಗೆ ಮದುವೆ ಮಾಡಿಯೋ, ಅಥವಾ ಅವನ ಕೈಯಿಂದ ದೇವರನ್ನು ಮುಟ್ಟಿಸಿ ಭಾಷೆ ತೆಗೆದುಕೊಂಡೋ, ನಾಲ್ಕಾರು ಜನರನ್ನು ಕೇಳಿ ವಿದೇಶಕ್ಕೆ ಕಳಿಸಲು ಒಪ್ಪಬಹುದು. ಗಾಂಧೀಜಿಯವರನ್ನು ಇಂಗ್ಲೆಂಡಿಗೆ ಕಳಿಸಿಕೊಡುವಾಗ ಅವರ ತಾಯಿ ಅನುಭವಿಸಿದ ಸಂಕಟವನ್ನು ಇಲ್ಲಿ ನೆನಿಸಿಕೊಳ್ಳಬಹುದು. ಹೆತ್ತವರ ಪುತ್ರವ್ಯಾಮೋಹ ಮಕ್ಕಳ ಪರಿಮಿತ ಜ್ಞಾನಕ್ಕೆ, ಸಂಕುಚಿತ ದೃಷ್ಟಿಗೆ, ಪುಕ್ಕಲು ತನಕ್ಕೆ ಕಾರಣವಾಗುತ್ತದೆ. ಜೀವನವನ್ನು ಎದುರಿಸುವ ಎದೆಗಾರಿಕೆಯೇ ಅವರಲ್ಲಿ ಇಲ್ಲವಾಗುತ್ತದೆ.

ಎರಡನೆಯದಾಗಿ ಪ್ರವಾಸ ಕಥನ ಎಂಬುದೊಂದಿದೆ ಎಂದೇ ಹೆಚ್ಚಿನ ಓದುಗರಿಗೆ ತಿಳಿದಿಲ್ಲ. ಪ್ರವಾಸಾನುಭವ ಸಾಹಿತ್ಯದ ವಸ್ತು ಆಗಬಲ್ಲುದು, ಕಥೆ-ಕಾದಂಬರಿಗಳಷ್ಟೇ ರಂಜಕ ವಾಗಬಲ್ಲುದು ಎಂಬುದನ್ನು ಪ್ರವಾಸಿಗಳು ಮನಗಂಡಂತೆ ತೋರುವದಿಲ್ಲ. ತೋರಿದರೂ ಪ್ರವಾಸ ಕಥನ ಕಥೆ-ಕಾದಂಬರಿ ಯಷ್ಟು ಜನಪ್ರಿಯವಲ್ಲದ್ದರಿಂದ ಇರಬಹುದು ಬರೆಯುವ ಗೋಜಿಗೆ ಸಾಕಷ್ಟು ಜನ ಹೋಗಿಲ್ಲ. ಕನ್ನಡದಲ್ಲಿ ಓದುಗರಿಗೆ

ಕೊರತೆ ಇಲ್ಲ; ಕೊಂಡು ಓದುವವರು ಬಹಳಿಲ್ಲ. ಓದಿದರೂ ಕಥೆ-ಕಾದಂಬರಿಗಳನ್ನು ಓದಿಯಾರು. ಇಂದು ಕನ್ನಡದ ಮಟ್ಟಿಗೆ ಹೇಳುವದಾದರೆ ಕಾದಂಬರಿ ಸಾಹಿತ್ಯಕ್ಕೆ ಸಾಕಷ್ಟು ಮಾರ್ಕೆಟ್ಟಿದೆ. ಈಚೆಗೆ ಚಲನಚಿತ್ರಕ್ಕೆ ಆಧಾರವಾದ ಕಾದಂಬರಿ, ಕಥೆಗಳ ಸುತ್ತ ಓದುಗರು ತಿರುಗುತ್ತಿರುತ್ತಾರೆ.

ಒಂದು ವೇಳೆ ಪ್ರವಾಸ ಸಾಹಿತ್ಯ ಬರೆದರೂ ಪ್ರಕಟಿಸುವ ಹೊಣೆಯನ್ನು ಪ್ರಕಾಶಕರು ಹೊರಬೇಕಲ್ಲ ? ಎಲ್ಲೋ ನಾಲ್ಕು ಜನ ಪ್ರಕಾಶಕರು ಹೆಸರುವಾಸಿಯಾದ ಸಾಹಿತಿ ಬರೆದ ಪ್ರವಾಸ ಕಥಾನಕವನ್ನು ಪ್ರಕಟಿಸಬಹುದು.

ಅವಕಾಶ, ಅನುಕೂಲತೆಗಳಿದ್ದರೂ ಆರೋಗ್ಯ ಚೆನ್ನಾಗಿರದಿದ್ದರೆ ಪ್ರವಾಸ ಕೈಗೊಳ್ಳುವುದು ಸಾಧ್ಯವಿಲ್ಲವಾಗುತ್ತದೆ. ಅನ್ಯಭಾಷೆ, ಒಗ್ಗದ ಊಟ, ಹವಾಮಾನಗಳಿಗೆ ಹೆದರಿ ಎಷ್ಟೋ ಜನರು ಸಿಕ್ಕ ಅವಕಾಶಗಳನ್ನು ಕೈ ಬಿಡುವದುಂಟು. ಅಥವಾ ಪರದೇಶದಲ್ಲಿ ಏಕಾಕಿ ಜೀವನದಿಂದ ಮಾನಸಿಕ ರೋಗಿಗಳಾಗಿ ಆತ್ಮಹತ್ಯೆಮಾಡಿಕೊಂಡ ಸುದ್ದಿಗಳನ್ನು ಪತ್ರಿಕೆಗಳಲ್ಲಿ ಓದಿ, ಕೆಲವರ ಬಾಯಿಯಿಂದ ಕೇಳಿ ಅಧೈರ್ಯ ಹೊಂದುತ್ತಾರೆ. ಉಚ್ಚ ವ್ಯಾಸಂಗಕ್ಕೆ ಹೋದ ನಮ್ಮ ತರುಣರು ಕೆಲವು ಗಂಡಾಂತರಗಳಿಗೆ ಸಿಲುಕಿ ಮಾನಸಿಕ ಅಸ್ವಸ್ಥತೆಗೆ ಗುರಿಯಾಗಿ ಮರಳಿ ಭಾರತಕ್ಕೆ ಬಂದ ಇಲ್ಲವೆ ಅಲ್ಲಿಯೇ ಆತ್ಮಹತ್ಯೆ ಮಾಡಿಕೊಂಡ ಹಲವಾರು ಉದಾಹರಣೆಗಳು ದೊರೆಯುತ್ತವೆ. ವಿ. ಕೃ. ಗೋಕಾಕರ "ಸಮರಸವೇ ಜೀವನ" ಕಾದಂಬರಿಯಲ್ಲಿ ಇಂಥ ಉದಾಹರಣೆಗಳು ಇರುವದನ್ನು ನೋಡಬಹುದು.

ಭಾರತದಲ್ಲಿ ವಿವಾಹವಾಗಿಯೂ ವಿದೇಶದ ಹೆಣ್ಣನ್ನು ಕಟ್ಟಿಕೊಂಡು, ಹಣಗಳಿಕೆಯ ಆಶೆಯಿಂದ ಅಲ್ಲಿಯೇ ತಳ ಊರುವ ವ್ಯಾಪಾರೀ ಮನೋಭಾವದವರೂ ಕೆಲವರು ಇದ್ದಾರೆ. ಭಾರತದಲ್ಲಿ ಅವನ ಕೈ ಹಿಡಿದ ಹತಭಾಗಿನಿಯ ಪಾಡು ನಾಯಿ-ಪಾಡು. ಅವಿವಾಹಿತನು ವಿದೇಶಿ ಹೆಣ್ಣನ್ನು ಹೆಂಡತಿಯನ್ನಾಗಿ ಸ್ವದೇಶಕ್ಕೆ ತಂದರೆ ಆ ಮಾತು ಬೇರೆ. ವಿದೇಶಿ ಹುಡುಗಿಯರ ಬಲೆಗೆ ಬೀಳಬಾರದೆಂದು ಹೆತ್ತವರು ವಿದೇಶ ಪ್ರಯಾಣದ ಮುನ್ನ ವಿವಾಹ ನೆರವೇರಿಸಿಯೇ ತಮ್ಮ ಮಕ್ಕಳನ್ನು ಕಳಿಸುತ್ತಾರೆ. ಹೆಂಡತಿ ಇದ್ದೂ ಮತ್ತೊಂದು ಹೆಣ್ಣನ್ನು ಮದುವೆಯಾಗುವವರೂ ಕೆಲವರಿದ್ದಾರೆ. ಸ್ವದೇಶದಲ್ಲಿ ತನ್ನನ್ನೇ ನಂಬಿದ ಕೈಹಿಡಿದಾಕೆಯನ್ನು, ತಂದೆ-ತಾಯಿಗಳನ್ನು ಮರೆತು ಅದಕ್ಕಿಂತ ಹೆಚ್ಚಾಗಿ ಮಾತೃಭೂಮಿಗೆ ದ್ರೋಹ ಬಗೆದು ವಿದೇಶದ ನಾಗರಿಕರಾಗುವವರೂ ಇಲ್ಲದಿಲ್ಲ. ಬಿಳೀ ಹೆಂಡತಿಯನ್ನು ಕಟ್ಟಿಕೊಂಡು ಸ್ವದೇಶಕ್ಕೆ ಬಂದವರೂ ಕೆಲವರು ಉಂಟು.

ಇನ್ನು ವಿದೇಶಗಳಲ್ಲಿ ಮದ್ಯಪಾನ, ಮಾಂಸಾಹಾರ ಸರ್ವೇಸಾಮಾನ್ಯ. ಸನಾತನವಾದಿ, ಸಂಪ್ರದಾಯಸ್ಥ ಭಾರತೀಯರು ಈ ಧಾರ್ಮಿಕ ಕಾರಣದಿಂದಾಗಿ ವಿದೇಶ ಪ್ರಯಾಣದ ವಿಚಾರವನ್ನು ಕೈಬಿಡುವದುಂಟು. ನಮ್ಮ ಧಾರ್ಮಿಕ ಆಚರಣೆಗಳಿಗೆ, ನಮ್ಮ ಶಾಕಾಹಾರದ ವ್ರತಕ್ಕೆ ಭಂಗ ಬರದಂತೆ ನಮ್ಮತನವನ್ನು ಉಳಿಸಿಕೊಂಡು, ನಮ್ಮ ಉದ್ದೇಶ ಈಡೇರಿಸಿಕೊಂಡು ಸ್ವದೇಶಕ್ಕೆ ಹಾಯಾಗಿ ಹಿಂತಿರುಗಬಹುದು. ಇದು ಕಷ್ಟಸಾಧ್ಯವಾದ ಕೆಲಸ. ಅಷ್ಟಟ ಶಾಕಾಹಾರಿಗಳಾಗಿ, ಬ್ರಹ್ಮ

ಚರ್ಯವನ್ನು ಉಳಿಸಿಕೊಂಡು, ಮದ್ಯಪಾನ ಮಾಡದೇ ವಿದೇಶ ಯಾತ್ರೆ ಮುಗಿಸಿಕೊಂಡು ಬಂದವರ ಉದಾಹರಣೆಗಳು ಗಾಂಧೀಜಿಯವರನ್ನು ಮೊದಲು ಮಾಡಿಕೊಂಡು ಸಾಕಷ್ಟಿವೆ. ವಿದೇಶಿ ಹೆಣ್ಣಿನ ಹೆದರಿಕೆಯಿಂದ, ಧಾರ್ಮಿಕ ಮನೋಭಾವನೆಯಿಂದ ಪೂರ್ವಗ್ರಹ ಪೀಡಿತರಾದ ಕೆಲವರು ತಮ್ಮ ಮಕ್ಕಳನ್ನು ವಿದೇಶಕ್ಕೆ ಕಳಿಸಲು ಒಪ್ಪದಿರುವುದು ಸೂಕ್ತವಾದದ್ದೇನೂ ಅಲ್ಲ. ಕೆಡುವ ಮಕ್ಕಳಾದರೆ ಮನೆಯಲ್ಲಿಯೇ ಕೆಡಬಹುದು. ಜ್ಞಾನದ ಕ್ಷಿತಿಜ ವಿಸ್ತಾರವಾಗಬೇಕಾದರೆ ವಿದೇಶ ಪ್ರವಾಸವು ಬೇಕು.

ಜಗತ್ತು ಇಂದು ತೀವ್ರವಾಗಿ ಬದಲಾವಣೆ ಹೊಂದುತ್ತಲಿದೆ. ನೆರೆ ರಾಷ್ಟ್ರಗಳ ಓಟದ ಗತಿ-ಗಮನಗಳನ್ನು ನಾವು ಗಮನಿಸಬೇಕು. ಜಲಪರ್ಯಟನೆ ಮಾಡುವುದು ಪಾಪ ಎಂಬ ಕಾಲವೊಂದಿತ್ತು. ತಳಬುಡವಿಲ್ಲದ ಕೆಲವು ವಿಚಿತ್ರ ನಂಬಿಗೆಗಳನ್ನು ಈಗ ಕೈಬಿಡಬೇಕು. ನಮ್ಮ ಮನೋಭೂಮಿಕೆಯಲ್ಲಿ ಬದಲಾವಣೆಯಾಗಬೇಕು. "ಈ ಜೆಟ್ ಯುಗದಲ್ಲಿ ಕೂಡ ಕನ್ನಡ ಪ್ರವಾಸ ಸಾಹಿತ್ಯ ಎತ್ತಿನ ಗಾಡಿಯ ವೇಗದಲ್ಲೇ ಕುಂಟುತ್ತ ಎಡವುತ್ತ ಮುಂದರಿಯಬೇಕಾದೀತು"[೧] ಎಂಬ ಮುನ್ನೆಚ್ಚರಿಕೆಯ ಮಾತನ್ನು ಗಮನಿಸಬೇಕು.

ಇನ್ನು ಕೆಲವರು ಬೇರೆ ಉದ್ದೇಶಗಳಿಗಾಗಿ ದೇಶದ ಒಳಗೆ ಮತ್ತು ದೇಶದ ಹೊರಗೆ ಪ್ರವಾಸ ಮಾಡುತ್ತಾರೆ. ಅವರ ಅನುಭವಗಳಾಗಲೀ, ಅವರು ನೋಡಿದ ಸ್ಥಳಗಳ ವರ್ಣನೆ

೧ ಚಿನ್ನದ ಬೆಳಸು,

ಯಾಗಲೀ, ಪ್ರವಾಸದ ಒಟ್ಟು ಗೊತ್ತು-ಗುರಿ ಬಹುಶ ಬರೆಯಲು ಅರ್ಹವಾಗಿರಲಿಕ್ಕಿಲ್ಲ.

ಇಂದು ಕೋಶ ಓದುವವರ ಸಂಖ್ಯೆ ಕಡಿಮೆ. ಆದರೆ ದೇಶ ತಿರುಗುವವರ ಸಂಖ್ಯೆ ಹೆಚ್ಚಿದೆ. ಕನ್ನಡದ ಜನ ವಿದೇಶ ಪ್ರವಾಸ ಕೈಕೊಳ್ಳುತ್ತಲಿದ್ದಾರೆ. ಆದರೆ ಅವರಲ್ಲಿ ಬಹುಜನರು ಬರಹಗಾರರಾಗಿಲ್ಲ.

ಪ್ರವಾಸಕ್ಕೆ ಒಂದು ಉದ್ದೇಶವಿರುವಂತೆ; ಪ್ರವಾಸ ಕಥನ ಬರೆಯುವವರಿಗೂ ಒಂದು ಉದ್ದೇಶ ಇದ್ದೇ ಇರುತ್ತದೆ. ತನ್ನ ಅನುಭವಗಳನ್ನು ಬರೆಹಕ್ಕಿಳಿಸುವಾಗ ಯಾರಿಗಾಗಿ ಬರೆಯುತ್ತಿದ್ದೇನೆ, ಏತಕ್ಕಾಗಿ ಬರೆಯುತ್ತಿದ್ದೇನೆ ಎಂಬ ಬಗ್ಗೆ ಆಲೋಚಿಸಬೇಕಾಗುತ್ತದೆ. ಅಷ್ಟಲ್ಲದೆ ಗ್ರಂಥರೂಪಕ್ಕೆ ಇಳಿಸುವಾಗ ಏನು ಬರೆಯಬೇಕು, ಹೇಗೆ ಬರೆಯಬೇಕು ಎಂಬುದನ್ನೂ ಆಲೋಚಿಸಬೇಕಾಗುತ್ತದೆ.

ಪ್ರವಾಸ ಕಾಲದಲ್ಲಿ ಅನೇಕ ಹೊಸ ವ್ಯಕ್ತಿಗಳ ಪರಿಚಯವಾಗುತ್ತದೆ. ಭಾಷೆ, ಸಂಸ್ಕೃತಿ, ಹೆಸರುಗಳಲ್ಲಿನ ಭಿನ್ನತೆಯಿಂದಾಗಿ ಅವು ಬೇಗ ಮರೆತುಹೋಗುವ ಸಂಭವವುಂಟು. ಅಂಕಿ-ಸಂಖ್ಯೆಗಳು,ಸೂಕ್ಷ್ಮ ವಿವರಗಳು ಕೆಲ ದಿನಗಳೆದಂತೆ ಸ್ಮೃತಿಪಟಲದಿಂದ ಜಾರಿ ಹೋಗುತ್ತವೆ. ನಂತರ ಬರೆದರಾಯಿತು ಎಂದು ನಮ್ಮ ಸ್ಮರಣ ಶಕ್ತಿಯನ್ನು ನಂಬಿದರೆ ಅದು ನಮಗೆ ಕೈಕೊಟ್ಟುಬಿಡುತ್ತದೆ. ಎಷ್ಟೋ ಸಲ ಟಿಪ್ಪಣೆ ಹಾಕಿಕೊಂಡದ್ದು ಟಿಪ್ಪಣಿಯಲ್ಲಿಯೇ ಉಳಿದು ಬಿಡುತ್ತದೆ. ಬಹಳವಾದರೆ ವಿದೇಶ ಪ್ರವಾಸದ

ಅನುಭವ ಹೇಳಲು ಭಾಷಣಕ್ಕೆ ಸಹಾಯಕವಾದೀತು. ಇಲ್ಲವೆ ಪತ್ರಿಕೆಯಲ್ಲಿ ಬಿಡಿ ಲೇಖನ ಬರೆಯಲು ಸಹಾಯಕವಾಗಬಹುದು. ಗ್ರಂಥರಚನೆಗೆ ಬೇಕಾದ ಟಿಪ್ಪಣಿ ಮಾಡಿಕೊಂಡವರು ಸಮಯದ ಅಭಾವದಿಂದಾಗಿ ತಮ್ಮ ಅನುಭವಗಳನ್ನು ಬರೆಯದಿರಬಹುದು.

ಪ್ರವಾಸ ಮಾಡಿಯೂ ಪ್ರವಾಸ ಕಥಾನಕಗಳನ್ನು ಗ್ರಂಥ ರೂಪದಲ್ಲಿ ಕೊಡದಿರುವ ಕನ್ನಡ ಪ್ರವಾಸಿಗಳ ಒಂದು ದೊಡ್ಡ ಪರಿವಾರವೇ ನಮ್ಮಲ್ಲಿ ದೊರೆಯುತ್ತದೆ. ಬಿಡಿಲೇಖನಗಳ ರೂಪ ದಲ್ಲಿ ವಾರಪತ್ರಿಕೆ, ಮಾಸಪತ್ರಿಕೆ, ತ್ರೈಮಾಸಿಕಗಳಿಗೆ ತಮ್ಮ ಪ್ರವಾಸಾನುಭವಗಳನ್ನು ಬರೆದವರು ಕೆಲವರಿದ್ದಾರೆ. ಇನ್ನು ಕೆಲವರು "ಬರಲಿದೆ" ಎಂಬ ಪಟ್ಟಿಯಲ್ಲಿ ಸೇರ್ಪಡೆಯಾಗುವವ ರಿದ್ದಾರೆ. ರಂ. ಶ್ರೀ. ಮುಗಳಿ, ಆರ್. ಸಿ. ಹಿರೇಮಠ, ನಾಡಿಗ್ ಕೃಷ್ಣಮೂರ್ತಿ, ಸರೋಜಿನಿ ಮಹಿಷಿ, ನವರತ್ನರಾಂ, ಹಾ.ಮಾ. ನಾಯಕ, ಎಂ. ಎಸ್. ಸುಂಕಾಪುರ, ಎಸ್. ಎಸ್. ಮಾಳವಾಡ ಮುಂತಾದವರನ್ನಿಲ್ಲಿ ಹೆಸರಿಸಬಹುದು. ದಿ. ತೀ. ನಂ. ಶ್ರೀ. ಅವರು ತಮ್ಮ ಪ್ರವಾಸಾನುಭವವನ್ನು ಕುರಿತು "ಪಶ್ಚಿಮಾಯನ" ಎಂಬ ಒಂದು ವಿಸ್ತಾರವಾದ ಪುಸ್ತಕವನ್ನೇ ಬರೆಯಲು ಯೋಚಿ ಸಿದ್ದರೂ ಆ ಕಾರ್ಯ ಪೂರೈಸಲಿಲ್ಲ. ಅವರಿಂದ ಎರಡು ಪ್ರವಾಸ ಲೇಖನಗಳು ಮಾತ್ರ ಪ್ರಕಟವಾಗಿವೆ.

ಪ್ರವಾಸ ಕಥನವನ್ನು ಯಾರು ಬೇಕಾದರೂ ಬರೆಯ ಬಹುದು. ಆದರೆ ಬರೆದದ್ದೆಲ್ಲ ಸಾಹಿತ್ಯವಾಗಲಾರದು. ಹಾಗಿ ದ್ದರೂ ಪ್ರಾಮಾಣಿಕವಾದ ಬರೆವಣಿಗೆಯಿಂದ ಪ್ರಯೋಜನ ಇದ್ದೇ ಇದೆ. ವೈದ್ಯರು, ಎಂಜಿನಿಯರರು, ವಿಜ್ಞಾನಿಗಳು ಹೀಗೆ

ನಾನಾ ವೃತ್ತಿ ಹಾಗೂ ಪ್ರವೃತ್ತಿಯವರು ಪ್ರವಾಸ ಸಾಹಿತ್ಯ ವನ್ನು ಸೃಜಿಸಬಲ್ಲರು, ಸೃಜಿಸಿದ್ದಾರೆ. ಆದರೆ ಕನ್ನಡದ ಮಟ್ಟಿಗೆ ಹೇಳುವದಾದರೆ ಸಾಹಿತಿಗಳಿಂದಲೇ ಬಹುಪಾಲಿನ ಪ್ರವಾಸ ಕಥನಗಳು ಬಂದಿವೆ. ಅದರಿಂದ ಅವು ಸಾಹಿತ್ಯಿಕ ಮೌಲ್ಯವುಳ್ಳ ವಾಗಿವೆ. ಸಂಖ್ಯಾದೃಷ್ಟಿಯಿಂದ ಕನ್ನಡದಲ್ಲಿ ಪ್ರವಾಸ ಗ್ರಂಥ ಗಳು ಕಡಿಮೆಯಾದರೂ ಅವುಗಳ ಗುಣಮಟ್ಟ ಮಾತ್ರ ಕಡಿಮೆ ಯಾಗಿಲ್ಲ. ಕೆಲವು ಪ್ರವಾಸಗ್ರಂಥಗಳು ಜಗತ್ತಿನ ಶ್ರೇಷ್ಠ ಗ್ರಂಥಗಳ ಸಾಲಿನಲ್ಲಿ ನಿಲ್ಲತಕ್ಕವಾಗಿವೆ ಎಂಬುದು ಅಭಿಮಾನ ಪಡಬೇಕಾದ ಮಾತಾಗಿದೆ. ಇತ್ತೀಚೆಗೆ ಪ್ರವಾಸ ಸಾಹಿತ್ಯ ತೀವ್ರ ಗತಿಯಿಂದ ಬೆಳೆಯುತ್ತಿರುವ ಒಂದು ಸಾಹಿತ್ಯ ಪ್ರಕಾರ.

ಕನ್ನಡದಲ್ಲಿ ಪ್ರವಾಸ ಸಾಹಿತ್ಯ ಹುಲುಸಾಗಿ ಬೆಳೆಯ ಬೇಕಾದರೆ ನಮ್ಮ ಮನೋಭೂಮಿಕೆ ಬದಲಾಗಬೇಕು. ಹೆಚ್ಚು ಹೆಚ್ಚಾಗಿ ಪ್ರವಾಸದ ಅನುಕೂಲತೆಗಳು ದೊರೆಯಬೇಕು, ಎಷ್ಟೇ ಹಣ ಖರ್ಚಾಗಲಿ, ಎಷ್ಟೇ ತೊಂದರೆಗಳಿರಲಿ ಹೊಸದನ್ನು ನೋಡಬೇಕು, ಅನುಭವಿಸಬೇಕು ಎನ್ನುವ ಸ್ವಭಾವ ನಮ್ಮಲ್ಲಿ ಬೆಳೆಯಬೇಕು. ಪ್ರವಾಸ ಕೇವಲ ಕೆಲವೇ ಜನರ ಹವ್ಯಾಸವಾಗದೆ ಅದು ಎಲ್ಲರಿಗೂ ಲಭ್ಯವಾಗುವಂತಾಗಬೇಕು. ನಮ್ಮ ಜನರು ಸಾಹಸದ ಮನೋಭಾವವನ್ನು ಬೆಳೆಸಿಕೊಳ್ಳಬೇಕು. ಯಾಕೆಂದರೆ "ಬದುಕು - ಪ್ರವಾಸ-ಸಾಹಿತ್ಯ - ವಿಜ್ಞಾನ-ಈ ಎಲ್ಲವುಗಳೂ ಒಟ್ಟಾಗಿ ಕಂಡುಬರುವ ಪ್ರವಾಸ ಸಾಹಿತ್ಯ ಮುಂದುವರಿದ ಜನಾಂಗದವರಲ್ಲಿ ಮಾತ್ರ ಬೆಳೆಯಲು ಸಾಧ್ಯ."*

---

* ಸಾಹಿತ್ಯ ಪ್ರಕಾರಗಳು-ಪಿ. ವ್ಹಿ. ಶಾಸ್ತ್ರೀ

# ೪. ಮೊದಲ ಪ್ರವಾಸ ಗ್ರಂಥ

ಕನ್ನಡದಲ್ಲಿ ಮೊಟ್ಟಮೊದಲ ಬಾರಿಗೆ ಬಂದ ಪ್ರವಾಸ ಗ್ರಂಥ ಯಾವುದು ಎಂಬ ಪ್ರಶ್ನೆ ಸಹಜವಾಗಿ ಕುತೂಹಲವನ್ನು ಕೆರಳಿಸುತ್ತದೆ. ಬಹಳಷ್ಟು ಜನ ತಿಳಿದುಕೊಂಡಂತೆ ವಿ. ಸೀ. ಅವರ "ಪಂಪಾಯಾತ್ರೆ"ಯೇ ಕನ್ನಡದಲ್ಲಿ ಮೊದಲ ಪ್ರವಾಸ ಗ್ರಂಥವಲ್ಲ. ೧೮೯೦ರ ಸುಮಾರಿನಲ್ಲಿ ಉತ್ತರ ಕನ್ನಡದ ಕರ್ಕಿ, ವೆಂಕಟರಮಣ, ಶಾಸ್ತ್ರಿ, ಸೂರಿ ಇವರು ಬರೆದ "ದಕ್ಷಿಣ ಭಾರತ ಯಾತ್ರೆ" ಎಂಬ ಕಥನವೇ ಈಗ ತಿಳಿದಮಟ್ಟಿಗೆ ಕನ್ನಡದಲ್ಲಿ ಮೊದಲ ಪ್ರವಾಸ ಗ್ರಂಥ. ೧೮೯೦ ರಷ್ಟು ಹಿಂದೆಯೇ ಮುಂಬಯಿಯ "ಭಾರತೀ ಛಾಪಖಾನೆ"ಯಲ್ಲಿ ಅದು ಪ್ರಕಟವಾಗಿದೆ. ಸೂರಿಯವರ ಈ ಕೃತಿಯ ಹೆಸರೇ ಸೂಚಿಸುವಂತೆ ಇದೊಂದು ಯಾತ್ರಾ ಪರಿಚಯ ಗ್ರಂಥ. ಕನ್ನಡದ ಪ್ರವಾಸ ಕಥನಗಳ ಹುಟ್ಟುಯಾತ್ರಾ ಪರಿಚಯದಿಂದ ಮೊದಲಾಯಿತೆನ್ನಬೇಕು. ಆ ನಂತರ ೩೪ ವರ್ಷಗಳ ಸುದೀರ್ಘ ಕಾಲಾವಧಿಯಲ್ಲಿ ಒಂದೂಪ್ರವಾಸ ಗ್ರಂಥ ಪ್ರಕಟವಾಗಲಿಲ್ಲ. ೧೯೩೪ ರಲ್ಲಿ ವಿ. ಸೀ. ಅವರಿಂದ "ಪಂಪಾಯಾತ್ರೆ" ಎಂಬ ವಿಶಿಷ್ಟ ಪ್ರವಾಸಗ್ರಂಥ ಬಂದಿತು. ಕನ್ನಡ ಪ್ರವಾಸ ಸಾಹಿತ್ಯದ ಹುಟ್ಟು ೧೯ ನೆಯ ಶತಮಾನದ ಉತ್ತರಾರ್ಧದಲ್ಲಿ ಆಗಿದ್ದು, ಅದು ಕಸುವಿನಿಂದ ೨೦ ನೆಯ ಶತಮಾನದ ಮಧ್ಯಭಾಗದಲ್ಲಿ ಬೆಳೆಯಿತು.

ಕನ್ನಡದಲ್ಲಿ ಮೊದಮೊದಲು ಪ್ರಕಟವಾದ ಪ್ರವಾಸ ಗ್ರಂಥಗಳಲ್ಲಿ ಅರ್ಧಕ್ಕಿಂತ ಹೆಚ್ಚು ಗ್ರಂಥಗಳು ತೀರ್ಥಕ್ಷೇತ್ರ

ಗಳನ್ನು ಪರಿಚಯಿಸುವಂಥವು. ಭಾರತ-ಕರ್ನಾಟಕ ಕ್ಷೇತ್ರಗಳನ್ನು ಪರಿಚಯಿಸುವ ಇಂಥ ಗ್ರಂಥಗಳಲ್ಲಿ ಸಾಹಿತ್ಯಗುಣ ಕಡಿಮೆ; ಕ್ಷೇತ್ರ ಮಹಿಮೆ ಹೆಚ್ಚು.

**ಕ್ಷೇತ್ರ ಪರಿಚಯಿಸುವ ಗ್ರಂಥಗಳು**— ಶ್ರೀ ಕ್ಷೇತ್ರ ಕುರುವಪುರ ಕುರುಗಂಡಿಯ ಪರಿಚಯ, ಸವದತ್ತಿಯ ಎಲ್ಲಮ್ಮಾ ಸಂಪೂರ್ಣ ಶ್ರೀಶೈಲ ಕ್ಷೇತ್ರದರ್ಶನ, ಹೊಂಬುಜ ಕ್ಷೇತ್ರ, ಕಾರ್ಕಳದ ಚರಿತ್ರೆ ಇವೆಲ್ಲ ದಕ್ಷಿಣ ಭಾರತದ ಪವಿತ್ರ ಕ್ಷೇತ್ರಗಳ ಪರಿಚಯ ಮಾಡಿಕೊಡುತ್ತವೆ. ಶ್ರೀಕೃಷ್ಣ ನಾರಾಯಣ ಗೋಸಾವಿಯವರು ಇಂಥ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಇಂದಿನ ಕಾಶ್ಮೀರ, ಬದರೀಯಾತ್ರೆ, ಹಿಮಾಲಯ ದರ್ಶನ, ಕೈಲಾಸ ಮಾನಸ ಸರೋವರ ಯಾತ್ರೆ, ಉತ್ತರ ಹಿಂದುಸ್ತಾನದ ಪ್ರವಾಸ ಇವು ಉತ್ತರ ಭಾರತದ ಪ್ರೇಕ್ಷಣೀಯ ಪವಿತ್ರ ಕ್ಷೇತ್ರಗಳ ಪರಿಚಯ ಮಾಡಿಕೊಡುತ್ತವೆ. ಭಾರದ್ವಾಜರ ಸಚಿತ್ರ ಭಾರತಯಾತ್ರೆ, ಶ್ರೀನಿವಾಸ ಕಂಪನಿಯವರ ಸಚಿತ್ರ ವಿಜಯನಗರ, ನ. ರಾ. ಗಲಗಲಿಯವರ ಬದರೀನಾರಾಯಣ ದರ್ಶನ, ಜಿ. ವೆಂಕಟಯ್ಯನವರ ಚಿನ್ನದ-ಗಿರಿಯಾತ್ರೆ, ಬನದ ಸೆರಗು, ಸೋಮನಾಥಾನಂದ, ಅಮರನಾಥ ಯಾತ್ರೆ, ಮತ್ತು ಹೈಮಾಚಲ ಸಾನ್ನಿಧ್ಯದಲ್ಲಿ ಇವೆಲ್ಲ ಒಂದೇ ಮಾಲಿಕೆಯಲ್ಲಿ ಬರುವ ಗ್ರಂಥಗಳು. ದಿ. ಬ. ಶಿವಮೂರ್ತಿಶಾಸ್ತ್ರಿಗಳ ಕರ್ನಾಟಕ ಸಂದರ್ಶನ, ಯು. ರಾಘವೇಂದ್ರಭಟ್ಟರ ರಜತಪೀಠದಿಂದ ರಜತಾದ್ರಿಗೆ, ಮ. ನ. ಮೂರ್ತಿಯವರ ನಮ್ಮ ಪ್ರವಾಸ ಮತ್ತು ನಾವು ಕಂಡ ಬೆಂಗಳೂರು, ಡಿ. ಟಿ. ರಂಗಸ್ವಾಮಿಯವರ ಭಾರತ

ಯಾತ್ರೆ, ಎಚ್. ಆರ್. ನಾಗರಾಜರವರ ಹಿಮಾಚಲ ಪ್ರದೇಶ, ಎಂ. ವೆಂಕಟಾಚಲಭಟ್ಟರ ಕಾಶ್ಮೀರ ಅಮರನಾಥ ಯಾತ್ರೆ, ಕೋ. ಚೆನ್ನಬಸಪ್ಪನವರ ದಕ್ಷಿಣೇಶ್ವರ ದರ್ಶನ, ಗುರುನಾಥ ಜೋಶಿಯವರ ಕಾಶ್ಮೀರ ಪ್ರವಾಸ, ಭದ್ರಗಿರಿ ಕೇಶವದಾಸರ ದಾಸಕೀರ್ತನ ಮಂಡಳಿಯ ಪ್ರಥಮ ಯಾತ್ರೆ, ಕೆ. ಗಣೇಶ ಮಲ್ಯರ ಶರಾವತಿಯಿಂದ ಗೋದಾವರಿ ವರೆಗೆ, ಶ್ರೀಕಂಠಶಾಸ್ತ್ರಿಯವರ ಮಾನಸ ಸರೋವರ ಮತ್ತು ಕೈಲಾಸಕ್ಷೇತ್ರ ಪ್ರಕರಣ, ಟಿ. ಚಂದ್ರರಾಜ ಶೆಟ್ಟಿಯವರ ಮಂಗಳೂರಿನಿಂದ ಮಧುರೆಗೆ, ಕೆ. ಗೋಪಾಲಕೃಷ್ಣರಾಯರ ತಿರುಪತಿ ಯಾತ್ರೆ, ಕೆ. ಕೊಟ್ರಗೌಡರ ನಮ್ಮ ಪ್ರವಾಸ, ಹ. ರಾ. ಪುರೋಹಿತರ ಶ್ರೀ ಬದರೀ ಕೇದಾರನಾಥ ದರ್ಶನ, ಎಸ್. ರಜತಾದ್ರಿಯವರ ಪಶ್ಚಿಮದ ಹೊಂಬೆಳಕು ಇವೆಲ್ಲ ಕ್ಷೇತ್ರ ಪರಿಚಯಿಸುವ ಗ್ರಂಥಗಳಾಗಿವೆ. ೧೯೬೩ ರಲ್ಲಿ ಪ್ರಕಟವಾದ ವಿ. ನಾ. ಅವರ 'ಯಾತ್ರಿಕನ ಪತ್ರಗಳು' ದಕ್ಷಿಣ ಭಾರತದ ಯಾತ್ರಾಸ್ಥಳಗಳ ಪರಿಚಯ ಮಾಡಿಕೊಡುತ್ತದೆ. ಇದು ಹೆಸರೇ ಸೂಚಿಸುವಂತೆ ಪತ್ರರೂಪದಲ್ಲಿರುವುದು ಒಂದು ವೈಶಿಷ್ಟ್ಯ.

ಕಥೆ–ಕಾದಂಬರಿ ಕ್ಷೇತ್ರದಲ್ಲಿ ವಿಶೇಷವಾಗಿ ಕೈಯಾಡಿಸುವ ಮಹಿಳಾ ಲೇಖಕಿಯರೂ ಕೆಲವು ಪ್ರವಾಸ ಗ್ರಂಥಗಳನ್ನು ಕೊಟ್ಟಿರುವದು ಸಂತೋಷದ ಸಂಗತಿ. ಮಹದೇವಿಯಮ್ಮನವರ 'ದೇವತಾತ್ಮ', ಪಿ. ಆರ್. ಜಯಲಕ್ಷ್ಮಮ್ಮಣ್ಣಿಯವರ 'ಬದರೀ ಯಾತ್ರೆ' ಮತ್ತು ಶಾಂತಾದೇವಿ ಮಾಳವಾಡರ 'ಶ್ರೀಗಿರಿಯಿಂದ ಹಿಮಗಿರಿಗೆ' ಇವು ಎತ್ತಿ ಹೇಳುವಂಥ ಕೃತಿಗಳು. ಶ್ರೀಮತಿ

ಮಾಳವಾಡರ ಶ್ರೀಗಿರಿಯಿಂದ ಹಿಮಗಿರಿಯಲ್ಲಿ ವಿಶೇಷವಾಗಿ ಕಾಶ್ಮೀರದ ವರ್ಣನೆ ಪುಸ್ತಕದ ಹೆಸರಿನಂತೆಯೇ ಸೊಗಸಾಗಿದೆ.

ಇದಲ್ಲದೆ ಬಾಲಕನೊಬ್ಬ ಬಾಲಕರಿಗಾಗಿ ಬರೆದ, ಅಜಿತ ಕುಮಾರನ 'ನನ್ನ ಪ್ರವಾಸ ಕಥನ', ಎಸ್. ವಿ. ಕೃಷ್ಣಮೂರ್ತಿ ರಾಯರ ' ದಿಲ್ಲಿಯ ಪತ್ರಗಳು ', ಗೊ. ರಾಮಸ್ವಾಮಿ ಅಯ್ಯಂಗಾರ್‌ರವರ 'ಮಹಾತ್ಮಾ ಗಾಂಧಿಯವರ ದಕ್ಷಿಣಯಾತ್ರೆ', ಗುಂಡ್ಮಿ ಚಂದ್ರಶೇಖರ ಐತಾಳರ 'ಸೌಂದರ್ಯದ ಸಾನಿಧ್ಯದಲ್ಲಿ', ಎಚ್. ಜಿ. ಜೋಶಿಯವರ 'ಶಿಲಾಹೃದಯ', ವೆಂ. ಮು. ಜೋಶಿಯವರ 'ಸೈನಿಕ ಉವಾಚ', ಎನ್. ಎಸ್. ಗದಗಕರ ಅವರ 'ಗೋವಾಯಾತ್ರೆ', ಟಿ. ಚಂದ್ರರಾಜ ಶೆಟ್ಟಿ ಅವರ 'ಭಾರತದ ಮಹಾನಗರಗಳು', ಎ. ಎಮ್. ಅಣ್ಣಿಗೇರಿಯವರ 'ಕರ್ನಾಟಕದ ಸಾಂಸ್ಕೃತಿಕ ಸ್ಥಳಗಳು', ಹಿರೇಮಲ್ಲೂರು ಈಶ್ವರನ್‌ರವರ 'ಕವಿ ಕಂಡ ನಾಡು' ಈ ಮಾಲಿಕೆಯಲ್ಲಿ ಶ್ರೇಷ್ಠ ಕೊಡುಗೆಗಳಾಗಿವೆ. ಮಿರ್ಜಿ ಅಣ್ಣಾರಾಯರ 'ನಾನು ಕಂಡ ನಾಡು' ಒಂದು ಉತ್ತಮ ಪ್ರವಾಸ ಗ್ರಂಥ. ಇಲ್ಲಿಯ ವಾಸ್ತವ ಚಿತ್ರಣ, ಜನಜೀವನ ದರ್ಶನಗಳು ಸುಂದರವಾಗಿವೆ. ೧೯೬೬ ರಲ್ಲಿ ಪ್ರಕಟವಾದ ಶ್ರೀ ಎಚ್. ವಿ. ಶ್ರೀರಂಗರಾಜರ 'ಸೋವಿಯೆತ್ ದಿನಚರಿ' ಕೂಡ ಲಕ್ಷ್ಯ ಸೆಳೆಯುವ ಪ್ರವಾಸ ಗ್ರಂಥ. ಯುನೆಸ್ಕೋ ಅಭ್ಯರ್ಥಿಯಾಗಿ ಶಿಕ್ಷಣ ಪದ್ಧತಿಯನ್ನು ಕುರಿತು ಅಧ್ಯಯನ ಮಾಡಲು ಮೂರು ತಿಂಗಳ ಮಟ್ಟಿಗೆ ರಶಿಯಕ್ಕೆ ಹೋದ ಅವರು ವಸ್ತುನಿಷ್ಠ, ನಿಷ್ಪಕ್ಷಪಾತದೃಷ್ಟಿಯಿಂದ ದಿನಚರಿ ರೂಪದಲ್ಲಿ ತಮ್ಮ ಪ್ರವಾಸಾನುಭವವನ್ನು ಬರೆದಿದ್ದಾರೆ.

ಕ್ಷೇತ್ರ ಪರಿಚಯ ಗ್ರಂಥಗಳಲ್ಲಿ ಕೆ. ಬಿ ಪ್ರಭು ಪ್ರಸಾದರ 'ದೇಗುಲಗಳ ದಾರಿಯಲ್ಲಿ' ಎಂಬುದು ಉತ್ತಮ ಕೃತಿ. ಹ. ರಾ. ಪುರೋಹಿತರ 'ರಾಮೇಶ್ವರ ಕನ್ಯಾಕುಮಾರಿ ದರ್ಶನ' ಮತ್ತು 'ಬದರೀ ಕೇದಾರನಾಥ ದರ್ಶನ', ಮಾನ್ವಿ ನರಸಿಂಗರಾಯರ 'ಕನ್ನಡ ಯಾತ್ರೆ', ಸಿದ್ದವ್ವನಹಳ್ಳಿ ಕೃಷ್ಣಶರ್ಮರ 'ವರ್ಧಾ ಯಾತ್ರೆ', 'ಭೂದಾನಯಜ್ಞ ಯಾತ್ರೆ' ಉತ್ತಮ ಕೃತಿಗಳು.

ಒಕ್ಕಲುತನದ ಪ್ರವಾಸ ಗ್ರಂಥಗಳಲ್ಲಿ ವೀ. ಚ. ಹಿತ್ತಲ ಮನಿಯವರ 'ಶರಾವತಿಯಿಂದ ಸಾಬರಮತಿ', ವಿ. ಪುರಂದರ ರೈರವರ 'ನಮ್ಮ ಪ್ರವಾಸಾನುಭವ' ಗಣನೀಯ ಕೃತಿಗಳು.

## ೬. ಅನುವಾದ ಪ್ರವಾಸ ಸಾಹಿತ್ಯ

ಪ್ರಾಚೀನ ಕಾಲದಿಂದಲೂ ಭಾರತಕ್ಕೆ ಜಗತ್ತಿನ ನಾನಾ ಮೂಲೆಗಳಿಂದ ವಿದೇಶಿ ಪ್ರವಾಸಿಗಳು ಬಂದಿದ್ದಾರೆ. ಅವರು ಇಲ್ಲಿನ ರಾಜವೈಭವ, ಜನರ ಆಚಾರ-ವಿಚಾರಗಳ ವಿಷಯಗಳನ್ನು ಸಹೃದಯತೆಯಿಂದ ನೋಡಿ ಹೊಗಳಿದ್ದಾರೆ. ಅಂದಿನ ರಾಜಕೀಯ, ಸಾಮಾಜಿಕ ಜೀವನ ತಿಳಿದುಕೊಳ್ಳುವಲ್ಲಿ ಇವರ ಗ್ರಂಥಗಳು ನೆರವು ನೀಡುತ್ತವೆ. ಭಾರತಕ್ಕೆ ಬಂದ ನೂರಾರು ಪ್ರವಾಸಿಗಳ ಪ್ರವಾಸ ಕಥನವನ್ನು ಕನ್ನಡಕ್ಕೆ ತಂದುಕೊಟ್ಟ ಶ್ರೇಯಸ್ಸು ಶ್ರೀ ಎಚ್. ಎಲ್. ನಾಗೇಗೌಡರಿಗೆ ಸಲ್ಲುತ್ತದೆ. ಅವರು

ಮಾರ್ಕೋ ಪೋಲೋನ ಪ್ರವಾಸಗ್ರಂಥವನ್ನು ಮೊದಲು ಕನ್ನಡಕ್ಕೆ ತಂದರು. ಈ ಅನುವಾದದಿಂದ ಪ್ರೋತ್ಸಾಹಿತರಾದ ಅವರು ಒಂದು ದಶಕದಷ್ಟು ಕಾಲ ಭಾರತದ ತುಂಬ ಸಂಚರಿಸಿ, ಹಲವು ಪ್ರಾಚ್ಯ ಕೋಶಾಗಾರಗಳಲ್ಲಿ ಹುದುಗಿದ್ದ ವರದಿಗಳನ್ನು ಹೆಕ್ಕಿ ತಂದು, ಅವುಗಳ ಸಾರವನ್ನು ಭಟ್ಟಿ ಇಳಿಸಿ, ಸುಮಾರು ೨೦೦ ಜನ ವಿದೇಶಿ ಪ್ರವಾಸಿಗಳ ಪ್ರವಾಸ ಕಥನವನ್ನು 'ಪ್ರವಾಸಿ ಕಂಡ ಇಂಡಿಯಾ' ಎಂಬ ಹೆಸರಿನಲ್ಲಿ ನಾಲ್ಕು ಬೃಹತ್ ಸಂಪುಟಗಳಲ್ಲಿ ಪ್ರಕಟಿಸಿದ್ದಾರೆ. ಈ ಗ್ರಂಥಗಳ ಮೂಲಕ ಕನ್ನಡ ಸಾಹಿತ್ಯಕ್ಕೆ ಅತ್ಯಮೂಲ್ಯ ಕಾಣಿಕೆ ಕೊಟ್ಟು ಅವರು ಕನ್ನಡಿಗರೆಲ್ಲರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಆಯ್. ಎ. ಎಸ್. ಅಧಿಕಾರಿಗಳಾಗಿರುವ ಎಚ್. ಎಲ್. ನಾಗೇಗೌಡರು ತಮ್ಮ ಸರಕಾರಿ ಕೆಲಸದ ಗಡಿಬಿಡಿಯಲ್ಲಿಯೂ ಇಂಥ ತುಂಬ ಶ್ರಮದ ಕಾರ್ಯ ಮಾಡಿದ್ದು ವಿಸ್ಮಯಪಡುವಂತಿದೆ.

ಜಿ. ಪಿ. ರಾಜರತ್ನಂರವರ 'ಚೀನಾ ದೇಶದ ಬೌದ್ಧ ಯಾತ್ರಿಕರು' 'ಫಾಹಿಯಾನನ ಕ್ಷೇತ್ರಯಾತ್ರೆ' ಇವು ವಿದೇಶಿ ಯಾತ್ರಿಕರ ಅನುಭವಗಳನ್ನು ಕುರಿತಾದ ಅನುವಾದ ಗ್ರಂಥಗಳು.

ಬಂಗಾಲಿ ಲೇಖಕ ಪ್ರಬೋಧಕುಮಾರ ಸನ್ಯಾಲ್‌ರವರ ಪ್ರವಾಸ ಪ್ರಬಂಧವನ್ನು ಎಂ.ಕೆ. ಭಾರತೀ ರಮಣಾಚಾರ್ಯರು 'ಮಹಾಪ್ರಸ್ಥಾನದ ಪಥದಲ್ಲಿ' ಎಂಬ ಹೆಸರಿನಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ. ಇದು ಒಂದು ಉತ್ತಮ ಕಾದಂಬರಿಯಂತಿದೆ. ಸಾಮ್ಯುಯಲ್ ಎಲಿಯಟ್ ಮಾರಿಸನ್‌ರವರ 'ನಾವಿಕ ಕ್ರಿಸ್ಟೊ

ಫರ್ ಕೊಲಂಬಸ್' ಎಂಬ ಗ್ರಂಥವನ್ನು ಎಚ್. ವಿ. ನಾರಾಯಣರಾಯರು ಹಾಗೂ ಥಾರ್ ಹೆಯರ್ ಡಾಹಾಲ್‌ರ ಕಾಂಟಿಕಿಯ ಸಾಹಸವನ್ನು ಎಚ್. ಎಸ್. ಮಾಧವರಾವ್ ಅವರು ಕನ್ನಡಕ್ಕೆ ಅನುವಾದಿಸಿದ್ದನ್ನೂ ಮರೆಯುವಂತಿಲ್ಲ.

ಕೆ. ಪಿ. ಎಸ್. ಮೆನನ್‌ರ ಪ್ರವಾಸಾನುಭವಗಳನ್ನು 'ವಿಶ್ವ ಪರ್ಯಟನೆ' ಎಂಬ ಹೆಸರಿನಲ್ಲಿ ಮಾ. ಭೀ. ಶೇಷಗಿರಿರಾವ್ ಅನುವಾದಿಸಿದ್ದಾರೆ. ೧೯೬೬ರಲ್ಲಿ ಪ್ರಕಟವಾದ ಈ ಗ್ರಂಥದಲ್ಲಿ ಏಷ್ಯಾ ಅಮೇರಿಕ ಖಂಡಗಳ ಪ್ರವಾಸಾನುಭವ ಇದೆ. ಬಾಂಗ್‌ಕಾಕ್, ಹಾಂಗ್‌ಕಾಂಗ್, ಟೋಕಿಯೋ, ಹೋನೊಲುಲು, ಸಾನ್ ಫ್ರಾನ್ಸಿಸ್ಕೊ, ಲಾಸ್ ಎಂಜಲೀಸ್, ಮೆಕ್ಸಿಕೋ, ನ್ಯೂಯಾರ್ಕ್ ನಯಾಗರ ಫಾಲ್ಸ್ ಮತ್ತು ವಾಷಿಂಗ್‌ಟನ್ ಮುಂತಾದ ನಗರಗಳ ಮತ್ತು ಅಲ್ಲಿನ ಜನರ ಜೀವಂತ ಚಿತ್ರಣ ಇಲ್ಲಿ ಇದೆ. ಮೆನನ್ನರ ರಾಜಕೀಯ ಕ್ಷೇತ್ರದ ಅನುಭವಗಳು ದಿನಚರಿ ರೂಪದಲ್ಲಿ ಬಂದಿವೆ.

ಇ. ಪಿ. ಮೆನನ್ ಹಾಗೂ ಸತೀಶಕುಮಾರರ "Foot Prints on Friendly Roads" ಎಂಬ ಪ್ರವಾಸ ಗ್ರಂಥ ೧೯೬೭ರಲ್ಲಿ ಪ್ರಕಟವಾಯಿತು. ದಿ. ತಿ. ತಾ. ಶರ್ಮರವರು "ಪ್ರಪಂಚ ಪರ್ಯಟಣೆ-ಪಾದಯಾತ್ರೆಯಲ್ಲಿ" ಎಂಬ ಹೆಸರಿನಿಂದ ಕನ್ನಡಕ್ಕೆ ಅದನ್ನು ಸಂಗ್ರಹಿಸಿದರು. ಇದೊಂದು ವಿಶಿಷ್ಟ ರೀತಿಯ ಪ್ರವಾಸ ಕಥನ. ಶಾಂತಿ ಸಂದೇಶ ಇಲ್ಲಿಯ ಪ್ರವಾಸದ ಉದ್ದೇಶ. ೧೯೬೨ರಿಂದ ೧೯೬೪ರ ವರೆಗೆ ಪ್ರಪಂಚದ ಉದ್ದ

ಅಗಲಕ್ಕೂ ಕಾಲ್ನಡಿಗೆಯಿಂದ ಪಯಣಮಾಡಿ ಅನೇಕ ಕಷ್ಟಗಳನ್ನು ಎದುರಿಸಿದ್ದು, ಸಾಮಾನ್ಯರ ಜೊತೆ ಬೆರೆತದ್ದು ಈ ಮುಂತಾದ ವಿಚಾರಗಳು ಇದರಲ್ಲಿ ಬಂದಿವೆ. ತಿ. ತಾ. ಶರ್ಮರವರ ಅನುವಾದವು ಮನೋಜ್ಞವಾಗಿದೆ. ಆದ್ದರಿಂದ ಅನುವಾದಿತ ಪ್ರವಾಸ ಸಾಹಿತ್ಯದಲ್ಲಿಯೇ ಇದೊಂದು ಮಹತ್ವದ ಕೃತಿಯೆನಿಸುತ್ತದೆ.

## ೭. ಕೆಲ ಮಹತ್ವದ ಪ್ರವಾಸ ಗ್ರಂಥಗಳು

'ಸಮುದ್ರದಾಚೆಯಿಂದ' ಎಂಬ ಮಹತ್ವಪೂರ್ಣ ಪ್ರವಾಸ ಗ್ರಂಥವನ್ನು ಪ್ರಕಟಿಸಿದ್ದ ವಿ. ಕೃ. ಗೋಕಾಕರು 'ಇಂದಿಲ್ಲ ನಾಳೆ' 'ಸಮುದ್ರದೀಚೆಯಿಂದ' ಎಂಬೆರಡು ಗ್ರಂಥಗಳನ್ನೂ ಕೊಟ್ಟಿದ್ದಾರೆ. 'ಇಂದಿಲ್ಲ ನಾಳೆ' ಗದ್ಯ ಪದ್ಯ ಮಿಶ್ರಿತವಾದ ಬರೆವಣಿಗೆ. ಇದು ಗೋಕಾಕರ ಅಮೇರಿಕೆಯ ಪ್ರವಾಸವನ್ನು ಕುರಿತದ್ದು. ಅಮೇರಿಕೆಯ ಅವಸರದ ಜೀವನ, ಯಾಂತ್ರಿಕ ನಾಗರಿಕತೆ ಮೊದಲಾದುವನ್ನು ಕುರಿತು ಗೋಕಾಕರು ತೀವ್ರವಾದ ತಮ್ಮ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದ್ದಾರೆ. ೧೯೫೭ ರಲ್ಲಿ ಟೋಕಿಯೋದಲ್ಲಿ 'ಪೆನ್' ಸಮ್ಮೇಳನಕ್ಕೆ ಭಾರತ ಶಾಖೆಯ ಒಬ್ಬ ಪ್ರತಿನಿಧಿಯಾಗಿ ಹೋಗಿದ್ದ ಗೋಕಾಕರು 'ಸಮುದ್ರದೀಚೆಯಿಂದ' ಗ್ರಂಥದಲ್ಲಿ ತಮ್ಮ ಜಪಾನ ಪ್ರವಾಸದ ಅನುಭವವನ್ನು ಬರೆದಿದ್ದಾರೆ. ಗೋಕಾಕರ 'ಪಯಣ'

'ಸಮುದ್ರಗೀತ', 'ಕಾಶ್ಮೀರ' ಮೊದಲಾದ ಕವನ ಸಂಗ್ರಹ ಗಳಲ್ಲಿಯೂ ಅವರ ಪ್ರವಾಸದ ಅನುಭವವನ್ನು ಕಾಣಬಹುದು.

ಶಿವರಾಮ ಕಾರಂತರು ಅನೇಕ ವಿಷಯಗಳಲ್ಲಿ ಮೈಲು ಗಲ್ಲಾಗಿ ನಿಲ್ಲುವ ಗ್ರಂಥಗಳನ್ನು ಕನ್ನಡಕ್ಕೆ ಕೊಟ್ಟದ್ದು, ಅವರ ಪ್ರವಾಸ ಗ್ರಂಥಗಳೂ ಅದ್ವಿತೀಯವಾಗಿವೆ. 'ಅಪೂರ್ವ ಪಶ್ಚಿಮ' ಅಂಥ ಒಂದು ಅಪೂರ್ವ ಪ್ರವಾಸ ಕಥನ. ಅದರಲ್ಲಿ ಅವರು ತಮ್ಮ ಯುರೋಪ್ ಪ್ರವಾಸದ ಅನುಭವಗಳನ್ನು ಬಿತ್ತರಿಸಿ ದ್ದಾರೆ. ಸ್ವಯಂ ಕಾದಂಬರಿಕಾರರಾದ ಕಾರಂತರ ಈ ಬರೆವಣಿಗೆ ಕಾದಂಬರಿಯಂತೆಯೇ ಕುತೂಹಲಕಾರಿಯಾಗಿದೆ. 'ಅಪೂರ್ವ ಪಶ್ಚಿಮ' ಎಂಬ ಗ್ರಂಥದ ಹೆಸರೇ ಅತ್ಯಂತ ಧ್ವನಿಪೂರ್ಣ ವಾಗಿದೆ. ತಮ್ಮ ಅಭಿರುಚಿಗನುಗುಣವಾಗಿ ಇಲ್ಲಿ ಕಾರಂತರು ಕಲೆ, ಸಾಹಿತ್ಯಗಳಿಗೆ ವಿಶೇಷಗಮನ ಕೊಟ್ಟಿದ್ದಾರೆ.

ಕಾರಂತರ 'ಅಬೂವಿಂದ ಬರಾಮಕ್ಕೆ' ಮತ್ತು 'ಪಾತಾಳಕ್ಕೆ ಪಯಣ' ಇವೆರಡೂ ಮಹತ್ವದ ಪ್ರವಾಸ ಗ್ರಂಥ ಗಳು. ೧೯೭೩ ರಲ್ಲಿ ಪ್ರಕಟವಾದ 'ಪಾತಾಳಕ್ಕೆ ಪಯಣ'ದಲ್ಲಿ ಅಮೇರಿಕದ ಒಂದು ತಿಂಗಳವರೆಗಿನ ತಿರುಗಾಟದ ಅನುಭವ ಗಳನ್ನು ಕೊಡುತ್ತಾರೆ. ಇಲ್ಲಿ ಜನಜೀವನಕ್ಕಿಂತ ಪ್ರಕೃತಿ ಕಾರಂತರಿಗೆ ಮುಖ್ಯವಾಗಿದೆ. ಅವರ ಆಸಕ್ತಿಗಳಾದ ಚಿತ್ರಕಲೆ ವಾಸ್ತುಶಿಲ್ಪ ಮತ್ತು ನದಿ, ಪರ್ವತ, ಸರೋವರ, ಮ್ಯೂಸಿಯಂ, ಆರ್ಟ್ಸ್ ಗ್ಯಾಲರಿ, ಗ್ರಾಂಡ್ ಕೆನಿಯನ್ ಕೊರಕಲಿನ ವರ್ಣನೆ ಇವೆಲ್ಲ ಇಲ್ಲಿ ಇವೆ. ಓಲ್ಡ್ ಫೈಥ್‌ಫುಲ್ ಗೈಸರ್-ಉಗಿ ಹಾಗೂ

ಕುದಿಯುವ ನೀರನ್ನು ಉಕ್ಕಿಸುವ ಬುಗ್ಗೆಯ ಸುಂದರ ವರ್ಣನೆ ಇಲ್ಲಿದೆ.

ಎಂ. ವೀರಪ್ಪನವರ 'ಸಯೋನರ ಜಪಾನ್' ಪತ್ರರೂಪದಲ್ಲಿ ಜಪಾನ್ ಪ್ರವಾಸಾನುಭವಗಳನ್ನು ಹೇಳಿಕೊಡುತ್ತದೆ. ಅಂತರ್‌ರಾಷ್ಟ್ರೀಯ ಕೂಲಿಕಾರರ ಪರಿಷತ್ತೊಂದರಲ್ಲಿ ಭಾರತದ ಪ್ರತಿನಿಧಿಯಾಗಿ ಭಾಗವಹಿಸಲು ತೆರಳಿದ್ದ ದಿನಕರ ದೇಸಾಯಿಯವರು ತಾವು ಕಂಡ ಪಡುವಣವನ್ನು ಮನೋಹರ ಗ್ರಂಥಮಾಲೆಯ 'ನಡೆದುಬಂದ ದಾರಿಯಲ್ಲಿ' ಚಿತ್ರಿಸಿದ್ದಾರೆ. ಇಲ್ಲಿ ದೇಸಾಯಿಯವರ ಕುತೂಹಲ ದೃಷ್ಟಿ ಎದ್ದು ಕಾಣುತ್ತದೆ. ಅಪರಿಚಿತ ನಾಡುಗಳ ಜೀವನ ವ್ಯವಸ್ಥೆಯ ವಿವರಣೆಗಳು ಇಲ್ಲಿ ದೊರಕುತ್ತವೆ.

ಬಿ. ಜಿ. ಎಲ್. ಸ್ವಾಮಿಯವರ 'ಅಮೇರಿಕೆಯಲ್ಲಿ ನಾನು' ಸ್ವಾರಸ್ಯಕರವಾದ ಪ್ರವಾಸಕಥನ. ಅಮೇರಿಕೆಯಲ್ಲಿ ವಿದ್ಯಾರ್ಥಿಜೀವನದಲ್ಲಿ ನಡೆದ ಕೆಲವು ಲಘು ಸನ್ನಿವೇಶಗಳ ಸ್ಮರಣೆ ಮತ್ತು ವಿಡಂಬನೆ ಇಲ್ಲಿದೆ. ಆಚಾರಗಳಲ್ಲಿ ಭಿನ್ನತೆ ಕಂಡುಬಂದಾಗ ಸಂದರ್ಭಗಳು ಹೇಗೆ ಸೃಷ್ಟಿಯಾಗುತ್ತವೆ ಎಂಬುದನ್ನು ಇಲ್ಲಿ ಕಾಣಬಹುದು.

೧೯೬೯ ರಲ್ಲಿ ಪ್ರಕಟವಾದ ಕೃಷ್ಣಾನಂದ ಕಾಮತರ 'ನಾನೂ ಅಮೇರಿಕೆಗೆ ಹೋಗಿದ್ದೆ' ಎಂಬ ಕಥಾನಕ ಅವರ ನಾಲ್ಕು ವರ್ಷದ ಅಮೇರಿಕದ ವಾಸ್ತವ್ಯದ ಅನುಭವಗಳಿಂದ ಕೂಡಿದೆ. ಕೀಟಶಾಸ್ತ್ರದಲ್ಲಿ ಡಾಕ್ಟರೇಟ್ ಮಾಡುವ ಉದ್ದೇಶದಿಂದ ಅವರು ಅಮೇರಿಕ ಪ್ರವಾಸ ಮಾಡುತ್ತಾರೆ. ತಮ್ಮ

ಜ್ಞಾನಾರ್ಜನೆಗಾಗಿ ಅಮೇರಿಕದ ನಾಲ್ಕೂ ಮೂಲೆಗಳಿಗೆ ಪ್ರಯಾಣ ಕೈಕೊಳ್ಳುತ್ತಾರೆ. ವಾಸ್ತವಿಕ ದೃಷ್ಟಿ, ವೈಜ್ಞಾನಿಕ ವಿಶ್ಲೇಷಣೆ, ತೂಕದ ಮಾತುಗಳು ಅಮೇರಿಕೆಯ ಸರಿಯಾದ ದರ್ಶನ ಮಾಡಿಕೊಡುತ್ತವೆ. ನವುರಾದ ಹಾಸ್ಯ, ವಿಡಂಬನೆ ಇಲ್ಲಿವೆ. ಸಾಮಾನ್ಯರೊಡನೆ ಬೆರೆತು, ಅಮೇರಿಕನ್ನರನ್ನು ತೂಗಿ ನೋಡಿದ್ದಾರೆ. ಇದೂ ಕೂಡ ಒಂದು ಮಹತ್ವದ ಕೃತಿ. ಮೇಲಿನ ಎರಡೂ ಕೃತಿಗಳು ವಿಜ್ಞಾನಿಗಳು ಕೊಟ್ಟ ಪ್ರವಾಸ ಗ್ರಂಥಗಳು.

ವೈದ್ಯರಾದ ರಾ. ಶಿ. ಯವರು 'ಕೊರವಂಜಿಯ ಪಡುವಣ ಯಾತ್ರೆ'ಯಲ್ಲಿ ಲಂಡನ್, ಪ್ಯಾರಿಸ್, ಮಾಸ್ಕೋ, ಬರ್ಲಿನ್ ನಗರಗಳ ತಮ್ಮ ಅನುಭವಗಳನ್ನು ವಿಶಿಷ್ಟ ಶೈಲಿಯಲ್ಲಿ ನಿರೂಪಿಸುತ್ತಾರೆ. ಭಾರತದ ವೈದ್ಯರ ಗುಂಪಿನವರಲ್ಲೊಬ್ಬರಾದ ರಾ. ಶಿ. ಯವರ ತೀಕ್ಷ್ಣ ವಿಮರ್ಶೆ, ನಿರ್ದಾಕ್ಷಿಣ್ಯ ಬರೆವಣಿಗೆ ಅಲ್ಲಿಯ ಜೀವನದ ಮೇಲೆ 'ಕ್ಷ' ಕಿರಣ ಬೀರುತ್ತವೆ.

## ೮. ೧೯೭೦ ರಿಂದೀಚಿನ ಕೆಲ ಪ್ರವಾಸ ಕಥನಗಳು

ಕು. ಶಿ. ಹರಿದಾಸಭಟ್ಟರ 'ಇತಾಲಿಯಾ ನಾನು ಕಂಡಂತೆ' ಇತ್ತೀಚಿನ ಪ್ರವಾಸ ಗ್ರಂಥಗಳಲ್ಲಿ ಮಹತ್ವದ್ದು. ಈ ಗ್ರಂಥದಲ್ಲಿ ಇತಾಲಿಯಾದ ಸಮಗ್ರ ದರ್ಶನವಿದೆ. ೧೯೬೨ರಲ್ಲಿ ತಾವು ಕೈಕೊಂಡ ಪ್ರಯಾಣದ ವಿಷಯವನ್ನು ಹರಿದಾಸಭಟ್ಟರು ಇದ

ರಲ್ಲಿ ಚಿತ್ರಿಸಿದ್ದಾರೆ. ಆರು ತಿಂಗಳ ಕಾಲ ನೇಪಲ್ಸ್ ನಗರದಲ್ಲಿ ವಾಸ್ತವ್ಯ ಮಾಡಿದ ಅವರು ಇಸ್ವೇ (ISVE Instituto Di Studi Per Lo Sviluppo Economico) ತಂಡದ ಇಪ್ಪತ್ತೊಂಬತ್ತು ದೇಶಗಳ ನಾಲ್ವತ್ತು ಸಹಪಾಠಿಗಳೊಡನೆ ಇತಾಲಿಯದ ಆರ್ಥಿಕ ಅಧ್ಯಯನ ಸಂಸ್ಥೆಯಲ್ಲಿ ಅಭಿವೃದ್ಧಿಯ ಮೂಲ ಸೂತ್ರಗಳ ಚಿಂತನೆ, ಚರ್ಚೆ, ಪ್ರತ್ಯಕ್ಷ ನಿದರ್ಶನ ಹಾಗೂ ಕ್ಷೇತ್ರ ಪರ್ಯಟನ ಮಾಡಿದ ವಿಷಯವನ್ನು ವಿವರವಾಗಿ ಈ ಗ್ರಂಥದಲ್ಲಿ ಅವರು ಕೊಟ್ಟಿದ್ದಾರೆ. ೪೫ ವಿವಿಧ ಪ್ರಸಂಗದ ಮಹತ್ವದ ಸ್ಥಳಗಳ ಸುಂದರ ಚಿತ್ರಗಳಿವೆ. ಅಂದವಾದ ಮುದ್ರಣ ದಿಂದ ಈ ಗ್ರಂಥಕ್ಕೆ ಹೆಚ್ಚಿನ ಮೆರಗು ಬಂದಿದೆ. ಅಲ್ಲದೆ ೧೮ ದಿನಗಳ ಕಾಲ ಅಮೇರಿಕೆಯಲ್ಲಿ ಪ್ರವಾಸ ಮಾಡುವ ಸದವಕಾಶ ಅವರಿಗೆ ದೊರೆತಿದ್ದು, ಇತಾಲಿಯಾದಿಂದ ಲಂಡನ್ ಮಾರ್ಗ ವಾಗಿ ಪ್ರಯಾಣ ಮಾಡಿದ ವಿಷಯ, ಲಂಡನ್ ನಗರ, ಮತ್ತು ನಯಾಗರ ಮುಂತಾದ ಪ್ರೇಕ್ಷಣೀಯ ಸ್ಥಳಗಳ ವರ್ಣನೆ ಮುಂತಾದವುಗಳನ್ನು ಈ ಗ್ರಂಥದಲ್ಲಿ ಸಮಾವೇಶಗೊಳಿಸಲಾಗಿದೆ. ಒಟ್ಟಾರೆ ಇತ್ತೀಚಿನ ಪ್ರವಾಸ ಗ್ರಂಥಗಳಲ್ಲಿ ಇದು ಗಮನಾರ್ಹ ವಾದ ಕೃತಿ.

ಡಾ. ಪಿ. ಎಸ್. ಶಂಕರ ಅವರ 'ನೆನಪಿನ ಸುಳಿಯಲ್ಲಿ ಲಂಡನ್' ವೈದ್ಯಕೀಯ ವ್ಯಾಸಂಗಕ್ಕಾಗಿ ಕುಟುಂಬ ಸಮೇತ ಕೈಕೊಂಡ ಯುರೋಪ ಯಾತ್ರೆಯ ಅನುಭವ ಕಥನದಿಂದ ಕೂಡಿದೆ. ಪುಸ್ತಕದ ಹೆಸರೇ ಸೂಚಿಸುವಂತೆ ತಮ್ಮ ಬರೆಹವನ್ನು ಲಂಡನ್ ನಗರಕ್ಕೆ ಸೀಮಿತಗೊಳಿಸಿದರೂ ಆ ನಗರ ಇಂಗ್ಲಂಡ

ದೇಶವನ್ನು ಪ್ರತಿನಿಧಿಸುತ್ತದೆ. ಬದುಕಿಗೆ ಹತ್ತಿರವಾದ ಎಲ್ಲ ವಿಷಯಕ್ಕೆ ಸಣ್ಣದಿರಲಿ ದೊಡ್ಡದಿರಲಿ ಇಲ್ಲಿ ಅವಕಾಶ ದೊರಕಿದೆ. ಶ್ರೀ ಶಂಕರ ಅವರು ಸುದೀರ್ಘ ಅವಧಿಯ ವರೆಗೆ ಅಲ್ಲಿ ಉಳಿದಿರುವದರಿಂದ ಲಂಡನ್ ಜೀವನವನ್ನು ಕೂಲಂಕಷವಾಗಿ, ನಿಷ್ಪಕ್ಷಪಾತವಾಗಿ ಈ ಗ್ರಂಥದಲ್ಲಿ ಚಿತ್ರಿಸಿದ್ದಾರೆ. ಭಾವನಾಪರವಶತೆಗೆ ಅವಕಾಶವಿಲ್ಲದ ವೈದ್ಯಕೀಯ ವಿಶ್ಲೇಷಣೆಯಂತೆ ಬರೆವಣಿಗೆ ನಿರಾಡಂಬರವಾಗಿ ಸಾಗಿದೆ.

ಭಾರತ-ಸಿಂಹಳ ಸಾಂಸ್ಕೃತಿಕ ವಿನಿಮಯ ಯೋಜನೆಯ ಅಂಗವಾಗಿ ಸಿಲೋನಿನಲ್ಲಿ ತನ್ನ ತಾಯಿಯ ಜೊತೆ ಕಳೆದ ಎರಡು ವರ್ಷಗಳ ಅನುಭವ ಕಥನವೇ ಕೆ. ವಿಶ್ವನಾಥ ರೈ ಅವರ 'ಲಂಕಾದರ್ಶನ'. ರೈ ಅವರು ನೃತ್ಯಾಭ್ಯಾಸಿಯಾಗಿ ಅಲ್ಲಿಗೆ ಹೋದದ್ದರಿಂದ ನೃತ್ಯ, ನಾಟಕ, ಸಂಗೀತ, ಚಿತ್ರ, ಚಲನಚಿತ್ರಗಳ ಬಗ್ಗೆ ವಿಶೇಷವಾಗಿ ಬರೆದಿರುವದು ಸ್ವಾಭಾವಿಕ. ಉಳಿದೆಲ್ಲ ಅಂಶಗಳೂ ಬರುವಂತೆ ತನಗೆ ದೊರೆತ ಅವಕಾಶವನ್ನು ಉಪಯೋಗಿಸಿಕೊಂಡಿದ್ದಾರೆ. ಸಾಧ್ಯವಾದ ಎಲ್ಲ ಕ್ಷೇತ್ರಗಳ ಪರಿಚಯವನ್ನೂ ಮಾಡಿಕೊಟ್ಟಿದ್ದಾರೆ.

ಉತ್ತರಪ್ರದೇಶ, ಬೀಹಾರ್, ಪಶ್ಚಿಮ ಬಂಗಾಲ ಪ್ರಾಂತಗಳ ಪ್ರವಾಸಾನುಭವಗಳನ್ನು 'ಕನ್ನಡದ ಕಣ್ಣು ಉತ್ತರದ ಮಣ್ಣು' ಎಂಬ ಗ್ರಂಥದಲ್ಲಿ ರಸಿಕ ಪುತ್ತಿಗೆಯವರು ಚಿತ್ರಿಸಿದ್ದಾರೆ. ಸ್ವಾರಸ್ಯಪೂರ್ಣ ಪ್ರಸಂಗ, ವಿಚಾರಪೂರ್ಣ ವಿವೇಚನೆಗಳಿಂದ ಕೂಡಿದ ಬೋಧಪ್ರದವಾದ ಪ್ರವಾಸ ಕಥನವಿದು.

ರಾವಬಹಾದ್ದೂರ್‌ರವರ ‘ ನಾನು ಕಂಡ ಬಂಗ್ಲಾದೇಶ ’ ಇತ್ತೀಚಿನ ಮಹತ್ವದ ಒಂದು ಪ್ರವಾಸ ಗ್ರಂಥ ಬಂಗ್ಲಾದೇಶದ ಜನತೆ ಸ್ವಾತಂತ್ರ್ಯಕ್ಕಾಗಿ ಸುರಿಸಿದ ಕಣ್ಣೀರು,ಹರಿಸಿದ ರಕ್ತದಕಥೆ ಯನ್ನು ಕಿವಿಯಾರೆ ಕೇಳಿ, ಪ್ರತ್ಯಕ್ಷ ಸ್ಥಳಗಳನ್ನು ಸಂದರ್ಶಿಸಿ ಬರೆದ ಗ್ರಂಥವಿದು. ಪ್ರೇಕ್ಷಣೀಯ ಸ್ಥಳಗಳ ದರ್ಶನಕ್ಕಾಗಲೀ, ಮೋಜಿ ಗಾಗಲೀ ಕೈಕೊಂಡ ಪ್ರವಾಸವಲ್ಲವಿದು. ಪಾಕ್ ಸೈನಿಕರ ರಾಕ್ಷಸೀ ಪ್ರವೃತ್ತಿಯ ಸಾಕ್ಷೀ ಚಿತ್ರದಂತೆ ಇಲ್ಲಿಯ ವರ್ಣನೆ ಯಿದೆ. ಬಂಗ್ಲಾ ವಿಮೋಚನೆಯ ನಂತರ ಅಲ್ಲಿನ ಪರಿಸ್ಥಿತಿ ಯನ್ನು ಪ್ರತ್ಯಕ್ಷ ಸಂದರ್ಶಿಸಿ ಬಂದ ಕನ್ನಡ ಸಾಹಿತಿಗಳಲ್ಲಿ ರಾವಬಹಾದ್ದೂರ್ ಅವರೇ ಮೊದಲಿಗರು. ಬಂಗ್ಲಾ ವಿದ್ಯಾರ್ಥಿ ಗಳ ಸ್ವದೇಶಾಭಿಮಾನ, ಬಡಜನರ ಪ್ರಾಮಾಣಿಕತೆ, ದಿ. ಶೇಖ ಮುಜಿಬರರ ಗಣಸಂಪರ್ಕದ ಮಹತ್ವ ಇವು ಅಲ್ಲಿಯ ವೈಶಿಷ್ಟ್ಯ ಗಳಾಗಿ ಕಾಣುತ್ತವೆ.

ಕೃಷ್ಣಾನಂದ ಕಾಮತರ ‘ವಂಗದರ್ಶನ’ದಲ್ಲಿ ಬಂಗಾಲಿಗಳ ಜನಜೀವನದ ಸಮಗ್ರ ಚಿತ್ರಣವಿದೆ. ಸಂಶೋಧನಾ ಕೇಂದ್ರ ವೊಂದರ ಮೇಲ್ವಿಚಾರಕರಾಗಿ ಪ್ಲಾಸಿಯಲ್ಲಿ ಎರಡು ವರ್ಷ ಕಾಲ ವಾಸ್ತವ್ಯ ಮಾಡಿದ ಅವರು ಮುನ್ನೂರು ಪುಟಗಳ ಈ ಗ್ರಂಥ ವನ್ನು ರಚಿಸಿದ್ದಾರೆ. ಬಂಗಾಲದಲ್ಲಿ ಆಗ ಅಶಾಂತಿ, ಕ್ರಾಂತಿ. ಎಷ್ಟೋ ಅಪಾಯದ ಸನ್ನಿವೇಶಗಳು, ತಾಳ್ಮೆಯನ್ನು ಒರೆಹಚ್ಚಿ ಬದುಕುವ ಪ್ರಸಂಗಗಳು. ಪೂರ್ವ ಬಂಗಾಲ ಈಗ ಸ್ವತಂತ್ರ ವಾಗಿದೆ. “ಬಂಗ್ಲಾ, ಸೋನಾರ ಬಂಗ್ಲಾ”ದ ವರೆಗೂ ಇಲ್ಲಿಯ ಕಥನದ ಹರಹು ಇದೆ. ಅನುಭವ-ಜನ್ಯ, ರೋಮಾಂಚಕ ಘಟನೆಗಳಿಂದ ಕೂಡಿದ ಈ ಕೃತಿ ಓದುಗರನ್ನು ಸೆರೆಹಿಡಿಯು ತ್ತದೆ.

ಎಚ್. ಶ್ರೀನಿವಾಸಯ್ಯನವರ 'ನಾ ಕಂಡ ಜರ್ಮನ' ದ್ವಿತೀಯ ಮುದ್ರಣ ಕಂಡಿದೆ. ಹಿಂದುಸ್ತಾನ ವಿಮಾನ ಕಾರ್ಖಾನೆಯ ಪರವಾಗಿ ಎರಡು ಸಲ ಜರ್ಮನಿಗೆ ಹೋಗಿದ್ದಾರೆ. ಇವರು ವೃತ್ತಿಯಿಂದ ಇಂಜಿನಿಯರರು. ೭-೮ ತಿಂಗಳು ಕಾಲ ಪಶ್ಚಿಮ ಜರ್ಮನಿಯ ಕಾರ್ಖಾನೆಯೊಂದರಲ್ಲಿ ಕೆಲಸ ಮಾಡಿ, ಮಧ್ಯಮ ವರ್ಗದ ಮನೆಯೊಂದರಲ್ಲಿ ಅತಿಥಿಯಂತೆ ವಾಸವಾಗಿದ್ದು, ಆ ವರ್ಗದ ಜನರ ಆಶೆ-ಆಕಾಂಕ್ಷೆ, ಜೀವನ ವಿಧಾನಗಳ ಪರಿಚಯ ಮಾಡಿಕೊಂಡು ಅದೆಲ್ಲವನ್ನು ಈ ಗ್ರಂಥದಲ್ಲಿ ಚಿತ್ರಿಸಿದ್ದಾರೆ. ಪರದೇಶದಲ್ಲಿ ಭಾರತೀಯರು ಹೇಗೆ ನಡೆದುಕೊಳ್ಳಬೇಕು ಎಂಬುದನ್ನು ಇದರಿಂದ ತಿಳಿದುಕೊಳ್ಳಬಹುದು. ಸರಳ, ಸುಂದರ, ಅರ್ಥಪೂರ್ಣ ಬರೆಹ ಇವರದು.

ದೇಜಗೌರವರ ವಿದೇಶಗಳಲ್ಲಿ ನಾಲ್ಕುವಾರ ಮತ್ತೊಂದು ಮಹತ್ವದ ಪ್ರವಾಸ ಕಥನ. ನೆಹರು ಪಾರಿತೋಷಕ ಪಡೆದು ರಶಿಯದ ಪ್ರವಾಸ ಕೈಕೊಂಡ ಬಸವರಾಜ ಕಟ್ಟೀಮನಿಯವರು 'ನಾನು ಕಂಡ ರಶಿಯಾ'ದಲ್ಲಿ ತಮ್ಮ ಪ್ರವಾಸಾನುಭವಗಳನ್ನು ಕೊಟ್ಟಿದ್ದಾರೆ. ಜಿ. ಎಸ್. ಶಿವರುದ್ರಪ್ಪನವರು ಮಾಸ್ಕೋದಲ್ಲಿ ಇಪ್ಪತ್ತೆರಡು ದಿನದ ಅನಿಸಿಕೆ, ಅನುಭವಗಳನ್ನು ಕಾವ್ಯಮಯ ಶೈಲಿಯಲ್ಲಿ ಸುಂದರವಾಗಿ ಚಿತ್ರಿಸಿದ್ದಾರೆ. ರಶಿಯದ ಬಗ್ಗೆ ಇದ್ದ ಕೆಲ ಪೂರ್ವಗ್ರಹಪೀಡಿತ ಭಾವನೆಗಳು ನಿರಾಧಾರವೆಂಬುದನ್ನು ಇದು ಸ್ಪಷ್ಟಪಡಿಸುತ್ತದೆ. ರಶಿಯನ್ನರ ಐತಿಹಾಸಿಕ ಪ್ರಜ್ಞೆ, ರಾಷ್ಟ್ರ ಪ್ರಜ್ಞೆಗಳ ಮೇಲೆ ಈ ಕೃತಿಗಳು ಬೆಳಕು ಬೀರುತ್ತವೆ.

'ನಿರ್ದೇಶಕನ ವಿದೇಶಯಾತ್ರೆ' ಮತ್ತು 'ಚಲನಚಿತ್ರದ ಮಹಾನೌಕೆ' ಇವು ಇತ್ತೀಚೆಗೆ ಬಂದ ಎರಡು ಪ್ರವಾಸ ಗ್ರಂಥಗಳು. ನಿರ್ದೇಶಕನ ವಿದೇಶ ಯಾತ್ರೆಯಲ್ಲಿ 'ಮುಕ್ತಿ' ಚಿತ್ರದ ನಿರ್ದೇಶಕರಾದ ಶ್ರೀ ಎನ್. ಲಕ್ಷ್ಮೀನಾರಾಯಣರು ತಮ್ಮ ವಿದೇಶ ಪ್ರಯಾಣದ ಅನುಭವಗಳನ್ನು ವಿವರಿಸಿದ್ದಾರೆ. ಚಿತ್ರ ರಂಗದಿಂದ ಬಂದ ಈ ಪ್ರವಾಸ ಗ್ರಂಥಗಳು ಕನ್ನಡದಲ್ಲಿ ವೈವಿಧ್ಯ ತೆಯನ್ನು ತಂದಿವೆ. ಈಗ ಬೇರೆ ಬೇರೆ ವೃತ್ತಿ-ಪ್ರವೃತ್ತಿಯ ಪ್ರವಾಸಿಗಳಿಂದ ಪ್ರವಾಸ ಗ್ರಂಥಗಳು ಬರುತ್ತಿರುವುದು ಸಮಾ ಧಾನದ ಸಂಗತಿ.

ಪ್ರವಾಸ ಸಾಹಿತ್ಯದ ಹರಹುವಿನಲ್ಲಿ ಸೇರಬಹುದಾದ ಅನೇಕ ಗ್ರಂಥಗಳೂ ಇವೆ. ಪ್ರವಾಸದಿಂದ ಪ್ರೇರಿತವಾದ ಅನೇಕ ಬಿಡಿ ಲೇಖನಗಳು ಪತ್ರಿಕೆಗಳಲ್ಲಿ ಸೂರೆಯಾಗಿವೆ. ಸ್ವಾಮಿ ವಿವೇಕಾನಂದರ 'ಕೊಲಂಬೊ ಇಂದ ಆಲ್ಮೋರಕೆ', 'ಕಡಲ ತಡಿಯಿಂದ ಹೈಮಾಚಲದಡಿಗೆ', ಪಂ. ನೆಹರುರವರ 'ಮಗಳಿಗೆ ತಂದೆಯ ಓಲೆಗಳು' ಕನ್ನಡದಲ್ಲಿ ಪ್ರಕಟವಾಗಿದ್ದು, ಅವು ಪ್ರವಾಸ ಸಾಹಿತ್ಯದ ಗುಂಪಿಗೆ ಸೇರಬಹುದಾದ ಕೃತಿಗಳಾಗಿವೆ.

ಯು. ಆರ್. ಅನಂತಮೂರ್ತಿ, ರಾಮಚಂದ್ರ ಶರ್ಮ ಮುಂತಾದ ನವ್ಯ ಸಾಹಿತಿಗಳು ತಮ್ಮ ವಿದೇಶ ಪ್ರವಾಸಗಳ ಅನುಭವವನ್ನು ಹಿನ್ನೆಲೆಯಾಗಿಟ್ಟುಕೊಂಡು ಹಲವು ಕಥೆ, ಕವಿತೆಗಳನ್ನು ರಚಿಸಿದ್ದಾರೆ. ಪ್ರವಾಸದಿಂದ ಪ್ರೇರಿತವಾದ ಕಥೆ ಗಳು ಕನ್ನಡದಲ್ಲಿ ಪ್ರಕಟವಾಗುತ್ತಿವೆ. ಇಂಗ್ಲೀಷ ಸಾಹಿತ್ಯ

ದಲ್ಲಿ ಪ್ರವಾಸಾನುಭವದ ಕಾದಂಬರಿಗಳು ಇರುವಂತೆ ಕನ್ನಡ ದಲ್ಲೂ ಅವು ಇಂದಿಲ್ಲ ನಾಳೆ ಬಂದಾವು.

ಜವಾರಲಾಲ ನೆಹರುರವರು ಕೆ. ಪಿ. ಎಸ್. ಮೆನನ್‌ರ ಗ್ರಂಥಕ್ಕೆ ಮುನ್ನುಡಿ ಬರೆಯುತ್ತ–"ಪ್ರವಾಸ ಮಾಡುವುದು ಒಳ್ಳೆಯದು; ಹಾಗೆ ಪ್ರವಾಸ ಮಾಡಲಾರದೇ ಹೋದಾಗ ಪ್ರವಾಸದ ಬಗೆಗೆ ಬಂದಿರುವ ಸಾಹಿತ್ಯವನ್ನಾದರೂ ಓದುವದು ಉತ್ತಮ ಹವ್ಯಾಸ" ಎಂದಿದ್ದಾರೆ. ಪ್ರವಾಸ ಮಾಡುವದು ಎಲ್ಲರಿಗೆ ಸಾಧ್ಯವಾಗಲಿಕ್ಕಿಲ್ಲ. ಪ್ರವಾಸ ಸಾಹಿತ್ಯ ಓದಲು ಯಾವ ಅಭ್ಯಂತರವೂ ಇಲ್ಲ. ಕನ್ನಡಿಗರಿಗೆ ಈ ಹವ್ಯಾಸ ಬೆಳೆಸಿ ಕೊಳ್ಳಲು ಸಾಕಷ್ಟು ಸರಕಿದೆ.

## ಗ್ರಂಥ ಋಣ


೧ ಕನ್ನಡ ಸಾಹಿತ್ಯ ಪರಿಷತ್ತಿನ ಚಿನ್ನದ ಬೆಳಸು

೨ ಮೈಸೂರು ರಾಜ್ಯ (ಪುಟ ೯೮–೯೯)

೩. ಪ್ರವಾಸ-ಹವ್ಯಾಸ (ಚದುರಂಗರ ಲೇಖನ)

೪ ವಿಶ್ವಕೋಶ ಮೂರನೆಯ ಸಂಪುಟ

೫ ಜ್ಞಾನ ಗಂಗೋತ್ರಿ

೬ ಸಾಹಿತ್ಯದ ಪ್ರಕಾರಗಳು- ಪಿ. ವ್ಹಿ. ಶಾಸ್ತ್ರೀ

೭ Illustrated weekly (2–1–1976)

೮ Yojana— 1st July 1975

೯ Years of Achievement—tourism—
davp. ಹಾಗೂ ಉದಹರಿಸಿದ ಪ್ರವಾಸ ಗ್ರಂಥಗಳು.


*
* *

## ಉಪನ್ಯಾಸ ಗ್ರಂಥಮಾಲೆಯ

## ಇತ್ತೀಚಿನ ಪ್ರಕಟನೆಗಳು

### ಬೆಲೆ : ಪ್ರತಿ ಒಂದಕ್ಕೆ ೨೫ ಪೈಸೆ

೧. ಕಬ್ಬು

—ಎಂ. ರಾಮದಾಸ ಕಾಮತ್

೨. ಕುಂಟುತ್ತಿರುವ ಕೈಮಗ್ಗದ ಉದ್ದಿಮೆ

—ಈರಣ್ಣ ಹಟ್ಟಿ

೩. ಭಾರತದಲ್ಲಿ ಕುಟುಂಬ ಯೋಜನೆಯ ಯಶಸ್ಸು

—ಬಿ. ಎಸ್. ನಂದ್ಯಾಳ

೪. ಪಂಚತಂತ್ರದ ಕಥೆಗಳು

—ವರದರಾಜ ಹುಯಿಲಗೋಳ

೫. ಪಂಪಕವಿ ಚಿತ್ರಿಸಿದ ಭೀಷ್ಮರು

—ಬಿ. ಸಿ. ಜವಳಿ

೬. ಮದುವೆ ಮತ್ತು ಮಹಿಳೆ

—ನೀಲಮ್ಮ ಕತ್ನಳ್ಳಿ

೭. ವೀರಶೈವಾಮೃತ ಮಹಾಪುರಾಣ

...ಕಾಶೀಪುಟ್ಟಸೋಮಾರಾಧ್ಯ

೮. ದನಗಳ ರೋಗಗಳು ಹಾಗು ಅವುಗಳ ನಿವಾರಣೋಪಾಯಗಳು

...ರಾಮರಾವ್ ಜ್ಯೋತಿ

೯. ಕವಯಿತ್ರಿ ಮಹಾದೇವಿ ವರ್ಮಾ

...ಎಸ್. ಜಿ. ಇಟಗಿ

೧೦. ಗ್ರಾಮಾಂತರ ಪ್ರದೇಶಗಳಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳ ಪಾತ್ರ

...ಎ. ಎಂ. ಎರನಾಳ

---

ಪ್ರಸಾರಾಂಗ ವಿಸ್ತರಣ–ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೫೮೦ ೦೦೩